CPMG / KA / BG-GPO/13/2003-2005

ವಿಶ್ವಮಾನವ ವರ್ಷ



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೩೯ | ಬೆಂಗಳೂರು, ಗುರುವಾರ, ಆಗಸ್ಟ್ ೧೨, ೨೦೦೪ ( ಶ್ರಾವಣ ೨೧, ಶಕ ವರ್ಷ ೧೯೨೬) | ಸಂಚಿಕೆ ೩೩ |
|---|---|---|

## ಭಾಗ - ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾಗಿ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಲೋಕೋಪಯೋಗಿ ಸಚಿವಾಲಯ

**ವಿಷಯ:** ಚಿಕ್ಕಮಗಳೂರು ಜಿಲ್ಲೆಯ ಶೃಂಗೇರಿ ತಾಲ್ಲೂಕು ವ್ಯಾಪ್ತಿಯಲ್ಲಿ ಬರುವ ಇತರೆ ಜಿಲ್ಲಾ ಮುಖ್ಯ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಯನ್ನಾಗಿ ಮೇಲ್ದರ್ಜೆಗೇರಿಸುವ ಬಗ್ಗೆ.

**ಓದಲಾಗಿದೆ:** ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು, ಇವರ ಪತ್ರ ಸಂಖ್ಯೆ: ಸಿಬಿಎಸ್-ಆರ್‌ಡಿಎಸ್-ಎಇ-2:ಮೇಲ್ದರ್ಜೆಗೇರಿಸಲು:2004-05, ದಿನಾಂಕ: 15.7.2004.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಪತ್ರದಲ್ಲಿ ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು ಇವರು ಚಿಕ್ಕಮಗಳೂರು ಜಿಲ್ಲೆ ಶೃಂಗೇರಿ ತಾಲ್ಲೂಕು ವ್ಯಾಪ್ತಿಯಲ್ಲಿ ಕೆಲವು ಇತರೆ ಜಿಲ್ಲಾ ರಸ್ತೆಗಳನ್ನು ಹಾಲಿ ಜಿಲ್ಲಾ ಪಂಚಾಯತ್ ನಿರ್ವಹಣೆಯಲ್ಲಿರುವ ಈ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಯನ್ನಾಗಿ ಮೇಲ್ದರ್ಜೆಗೇರಿಸಲು ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ.

| | | |
|---|---|---|
| ಅ) | ಕಾಳಿಕಾಂಬ ದೇವಸ್ಥಾನದ ಕೂಡು ರಸ್ತೆ | 0.25 ಕಿಮೀ |
| ಆ) | ಶೃಂಗೇರಿ ಟೌನ್ ಲಿಮಿಟ್ ರಸ್ತೆಯಿಂದ ಕುರುಬಗೇರಿ ಮಾರ್ಗವಾಗಿ ಜಯಪುರ ಶೃಂಗೇರಿ ರಸ್ತೆಗೆ ಕೂಡು ರಸ್ತೆ | 0.9 ಕಿಮೀ |
| ಇ) | ಶಾರದಾಂಬ ದೇವಸ್ಥಾನದಿಂದ ಗಾಂಧಿ ಮೈದಾನಕ್ಕೆ ಕೂಡು ರಸ್ತೆ | 0.15 ಕಿಮೀ |
| | | (ಒಟ್ಟು 1.3 ಕಿಮೀ) |
| ಈ) | ಶೃಂಗೇರಿ ತೆಕ್ಕೂರು ಇತರೆ ಜಿಲ್ಲಾ ಮುಖ್ಯರಸ್ತೆ | 6.2 ಕಿಮೀ |

**ಸರ್ಕಾರಿ ಆದೇಶ ಸಂಖ್ಯೆ: ಲೋಇ 72 ಸಿಆರ್‌ಎಂ 2004, ಬೆಂಗಳೂರು, ದಿನಾಂಕ: 16ನೇ ಜುಲೈ 2004**

ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು, ಇವರು ಸಲ್ಲಿಸಿರುವ ಪ್ರಸ್ತಾವನೆಯನ್ನು ಪರಿಶೀಲಿಸಲಾಗಿ ಈ ಕೆಳಕಂಡ ಇತರೆ ಜಿಲ್ಲಾ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸಿ ಲೋಕೋಪಯೋಗಿ ಇಲಾಖೆಯ ವ್ಯಾಪ್ತಿಗೆ ತೆಗೆದುಕೊಳ್ಳಲು ಸರ್ಕಾರದ ಅನುಮೋದನೆಯನ್ನು ನೀಡಲಾಗಿದೆ.

| | | |
|---|---|---|
| ಅ) | ಕಾಳಿಕಾಂಬ ದೇವಸ್ಥಾನದ ಕೂಡು ರಸ್ತೆ- | 0.25 ಕಿಮೀ |
| ಆ) | ಶೃಂಗೇರಿ ಟೌನ್ ಲಿಮಿಟ್ ರಸ್ತೆಯಿಂದ ಕುರುಬಗೇರಿ ಮಾರ್ಗವಾಗಿ ಜಯಪುರ ಶೃಂಗೇರಿ ರಸ್ತೆಗೆ ಕೂಡು ರಸ್ತೆ | 0.9 ಕಿಮೀ |
| ಇ) | ಶಾರದಾಂಬ ದೇವಸ್ಥಾನದಿಂದ ಗಾಂಧಿ ಮೈದಾನಕ್ಕೆ ಕೂಡು ರಸ್ತೆ | 0.15 ಕಿಮೀ |
| ಈ) | ಶೃಂಗೇರಿ ತೆಕ್ಕೂರು ಇತರೆ ಜಿಲ್ಲಾ ಮುಖ್ಯರಸ್ತೆ | 6.2 ಕಿಮೀ |

(ಮೇಲಿನ ಕ್ರಮ ಸಂಖ್ಯೆ: (ಅ) ರಿಂದ (ಇ) ವರೆಗೆ ಅಂದರೆ 3 ಇತರೆ ಜಿಲ್ಲಾ ಮುಖ್ಯ ರಸ್ತೆಗಳನ್ನು ಅಂದರೆ ಒಟ್ಟು 1.3 ಕಿಮೀ ರಸ್ತೆಯನ್ನು ಜಿಲ್ಲಾ ಮುಖ್ಯ ರಸ್ತೆಯನ್ನಾಗಿ ಮೇಲ್ದರ್ಜೆಗೇರಿಸಿ ಹಾಲಿ ಇರುವ ಶೃಂಗೇರಿ ಟೌನ್ ಲಿಮಿಟ್‌ನಲ್ಲಿ ಬರುವ ಜಿಲ್ಲಾ ಮುಖ್ಯರಸ್ತೆಗೆ ವಿಲೀನಗೊಳಿಸಲಾಗುವುದು)

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಶೇಖ್ ಅಬ್ದುಲ್ ವಾಜಿದ್**

ಪಿ.ಆರ್. 787 ಸರ್ಕಾರದ ಅಧೀನ ಕಾರ್ಯದರ್ಶಿ, ಲೋಕೋಪಯೋಗಿ ಇಲಾಖೆ (ಸಂಪರ್ಕ).

## ಇಂಧನ ಸಚಿವಾಲಯ

**ವಿಷಯ:** ಮೆಸರ್ಸ್ ದಾವಣಗೆರೆ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಹಂಚಿಕೆ ಆಗಿರುವ 0.5 ಮೆಗಾ ವ್ಯಾಟ್ ಸಾಮರ್ಥ್ಯದ ಹೊನಗೊಡು ಕಿರು ಜಲ ವಿದ್ಯುತ್ ಯೋಜನೆ ರದ್ದತಿ ಬಗ್ಗೆ.

**ಓದಲಾಗಿದೆ:** 1. ಸರ್ಕಾರಿ ಆದೇಶ ಸಂಖ್ಯೆ: ಡಿಇ 131 ಎನ್‌ಸಿಇ 2001, ದಿನಾಂಕ: 8.10.2001.

2. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/06/ಹೊನಗೊಡು/2004/722, ದಿನಾಂಕ: 30.4.2004 ಮತ್ತು ಕೆಆರ್‌ಇಡಿ/06/ಹೊನಗೊಡು/2004/1139, ದಿನಾಂಕ: 25.6.2004.

**ಪ್ರಸ್ತಾವನೆ:**

ಮೇಲೆ (1) ರಲ್ಲಿ ಓದಲಾದ ಆದೇಶದಲ್ಲಿ ಮೆಸರ್ಸ್ ದಾವಣಗೆರೆ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಮೈಸೂರು ಜಿಲ್ಲೆಯ ಹುಣಸೂರು ತಾಲ್ಲೂಕಿನ ಹೊನಗೊಡು ಗ್ರಾಮದಲ್ಲಿ ಕಾವೇರಿ ನದಿಗೆ ಅಡ್ಡಲಾಗಿ 0.5 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿದೆ.

2. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕರು ಮೇಲೆ ಓದಲಾದ (2)ರ ಪತ್ರಗಳಲ್ಲಿ ಸದರಿ ಯೋಜನೆಯು ತಾಂತ್ರಿಕವಾಗಿ ಹಾಗೂ ಆರ್ಥಿಕವಾಗಿ ಸಮರ್ಪಕವಾಗಿಲ್ಲವೆಂದು ಅಭಿವೃದ್ಧಿದಾರರಿಂದ ಕೋರಿಕೆ ಮೇರೆಗೆ ಹಂಚಿಕೆ ಆದೇಶವನ್ನು ರದ್ದುಪಡಿಸಲು ಶಿಫಾರಸ್ಸು ಮಾಡಿರುವ ಹಿನ್ನಲೆಯಲ್ಲಿ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಇಂಇ 189 ಎನ್‌ಸಿಇ 2004, ಬೆಂಗಳೂರು, ದಿನಾಂಕ: 19ನೇ ಜುಲೈ 2004**

3. ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳನ್ನು ಕೂಲಂಕಷವಾಗಿ ಪರಿಶೀಲಿಸಿ ಸರ್ಕಾರವು ಮೆಸರ್ಸ್ ದಾವಣಗೆರೆ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಮೈಸೂರು ಜಿಲ್ಲೆ ಹುಣಸೂರು ತಾಲ್ಲೂಕಿನ ಹೊನಗೊಡು ಗ್ರಾಮದಲ್ಲಿ ಕಾವೇರಿ ನದಿಗೆ ಅಡ್ಡಲಾಗಿ ಮೇಲೆ (1) ರಲ್ಲಿ ಓದಲಾದ ಆದೇಶದಲ್ಲಿ ಹಂಚಿಕೆ ಮಾಡಲಾದ 0.5 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯ ಹಂಚಿಕೆ ಆದೇಶವನ್ನು ತಕ್ಷಣದಿಂದ ಜಾರಿಗೆ ಬರುವಂತೆ ರದ್ದುಪಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಎಲ್. ಜಯರಾಂ**

ಪಿ.ಆರ್. 788 ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ.

## ಮಹಿಳಾ ಹಾಗೂ ಮಕ್ಕಳ ಅಭಿವೃದ್ಧಿ ಸಚಿವಾಲಯ

**ವಿಷಯ:** ಅಂಗವಿಕಲರು, ಗುರುತಿನ ಚೀಟಿಯ ಮೇಲೆ ಪಡೆಯಬಹುದಾದ ಪ್ರಯೋಜನಗಳ ಕುರಿತು.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ: ಮಮಅ/33/ಪಿಹೆಚ್‌ಪಿ/2002, ದಿನಾಂಕ: 02.03.2002.

2. ಸರ್ಕಾರದ ಆದೇಶ ಸಂಖ್ಯೆ: ಮಮಇ/107/ಪಿಹೆಚ್‌ಪಿ/2003, ದಿನಾಂಕ: 11.07.2003.

3. ನಿರ್ದೇಶಕರು, ಅಂಗವಿಕಲರ ಮತ್ತು ಹಿರಿಯ ನಾಗರೀಕರ ಕಲ್ಯಾಣ ಇಲಾಖೆ ಇವರ ಪತ್ರ ಸಂಖ್ಯೆ: ನಿಅಕಇ/ಮಾ.ಚೀ/ಮಾ.2003-04:16450, ದಿನಾಂಕ: 16.03.2004.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಆದೇಶದಲ್ಲಿ ಅಂಗವಿಕಲರಿಗೆ ಗುರುತಿನ ಚೀಟಿಯನ್ನು ನೀಡಲು ಮಾರ್ಗದರ್ಶನ ಹಾಗೂ ವಿತರಿಸುವ ವಿಧಾನವನ್ನು ತಿಳಿಸಲಾಗಿರುತ್ತದೆ. ಸದರಿ ಆದೇಶದಲ್ಲಿ ತಜ್ಞ ಸರ್ಕಾರಿ ವೈದ್ಯಾಧಿಕಾರಿಗಳು ಖಾಸಗಿ ವೈದ್ಯಾದಿಕಾರಿಗಳನ್ನೊಳಗೊಂಡ ಆರೋಗ್ಯ ತಪಾಸಣಾ ಶಿಬಿರವನ್ನು ಪ್ರತಿ ಹೋಬಳಿ ಮಟ್ಟದಲ್ಲಿ ಏರ್ಪಡಿಸಿ ಈ ಶಿಬಿರದಲ್ಲಿ ತಜ್ಞ ವೈದ್ಯಾದಿಕಾರಿಗಳು ಅಂಗವಿಕಲತೆಯನ್ನು ದೃಢೀಕರಿಸಿ ಪ್ರಮಾಣಪತ್ರ ನೀಡತಕ್ಕದ್ದೆಂದು ಸೂಚಿಸಲಾಗಿರುತ್ತದೆ.

ಮೇಲೆ ಕ್ರಮಸಂಖ್ಯೆ (2) ರಲ್ಲಿ ಓದಲಾದ ಆದೇಶದಲ್ಲಿ ಕೇಂದ್ರ ಸರ್ಕಾರವು ಹೊರಡಿಸಿರುವ ಮಾರ್ಗಸೂಚಿಗಳ ಪ್ರಕಾರ ವಿವಿಧ ಬಗೆಯ ಅಂಗವಿಕಲತೆಗಳನ್ನು ಗುರುತಿಸಿ ಅಂಗವಿಕಲ ಪ್ರಮಾಣ ಪತ್ರ ನೀಡಲು ಪ್ರತಿ ಜಿಲ್ಲೆಯಲ್ಲಿ ವೈದ್ಯಕೀಯ ಮಂಡಳಿಯನ್ನು ರಚಿಸಲಾಗಿದೆ.

ನಿರ್ದೇಶಕರು, ಅಂಗವಿಕಲ ಮತ್ತು ಹಿರಿಯ ನಾಗರೀಕರ ಕಲ್ಯಾಣ ಇಲಾಖೆ ಇವರು ಮೇಲೆ ಕ್ರಮ ಸಂಖ್ಯೆ (3) ರಲ್ಲಿ ಓದಲಾದ ಪತ್ರದೊಂದಿಗೆ ಸಲ್ಲಿಸಿರುವ ಪ್ರಸ್ತಾವನೆಯಲ್ಲಿ ಅಂಗವಿಕಲರಿಗೆ ಗುರುತಿನ ಚೀಟಿ ಇದ್ದರೂ ಸಹ ಸರ್ಕಾರದ ಪ್ರಯೋಜನಗಳನ್ನು ಪಡೆಯಲು ಅಂಗವಿಕಲರಿಂದ ಸರ್ಟಿಫಿಕೇಟ್ ಕೇಳುತ್ತಿದ್ದು, ಇದರಿಂದ ಅಂಗವಿಕಲರಿಗೆ ತೊಂದರೆಯಾಗುತ್ತಿದೆ ಎಂದು ತಿಳಿಸಿ, ಅಂಗವಿಕಲರಿಗೆ ನೀಡಲಾದ ಗುರುತಿನ ಚೀಟಿಯ ಮೇಲೆ ಅವರು ಸರ್ಕಾರದಿಂದ ಯಾವ ಯಾವ ಪ್ರಯೋಜನ ಪಡೆಯಲು ಅರ್ಹರಿರುತ್ತಾರೆ ಎಂಬುದನ್ನು ನಮೂದಿಸಲು ಸರ್ಕಾರದ ಮಂಜೂರಾತಿ ಕೇಳಿದ್ದಾರೆ, ಅಲ್ಲದೇ ಈಗಾಗಲೇ ಸರ್ಕಾರವು ಪ್ರತಿ ಜಿಲ್ಲೆಯಲ್ಲಿ ವೈದ್ಯಕೀಯ ಮಂಡಳಿಗಳನ್ನು

ರಚಿಸಿರುವ ಹಿನ್ನೆಲೆಯಲ್ಲಿ ಗುರುತಿನ ಚೀಟಿಯಲ್ಲಿ ವೈದ್ಯಕೀಯ ಮಂಡಳಿಯ ಅಧ್ಯಕ್ಷರು/ಸದಸ್ಯರ ಹುದ್ದೆಗಳನ್ನು ನಮೂದಿಸಿ ಕನಿಷ್ಟ ಇಬ್ಬರು ಸದಸ್ಯರು ಸಹಿ ಮಾಡಲು ಸೂಚಿಸಿ ಇನ್ನು ಮುಂದೆ ಒಂದೇ ಬಣ್ಣದಲ್ಲಿ ಪರಿಶೀಲಿಸಿ ಈ ಕೆಳಗಿನ ಆದೇಶ ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಮಮಅ:184:ಪಿಹೆಚ್‌ಪಿ:2004, ಬೆಂಗಳೂರು, ದಿನಾಂಕ: 28ನೇ ಜೂನ್ 2004**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದಾಗಿ ಅಂಗವಿಕಲರಿಗೆ ನೀಡಲಾಗುತ್ತಿರುವ ಗುರುತಿನ ಚೀಟಿಯಲ್ಲಿ ಈ ಕೆಳಗಿನ ಪ್ರಯೋಜನಗಳನ್ನು ಪಡೆಯಲು ಅಂಗವಿಕಲರು ಅರ್ಹರಿರುತ್ತಾರೆಂದು ನಮೂದಿಸಲು ಸರ್ಕಾರದ ಅನುಮತಿ ನೀಡಿದೆ.

(1) ಉಚಿತ/ರಿಯಾಯಿತಿ ಬಸ್‌ಪಾಸ್ ಸೌಲಭ್ಯ ಪಡೆಯಲು
(2) ರೈಲ್ವೆ ರಿಯಾಯಿತಿ ಪಡೆಯಲು
(3) ಎರೋಪ್ಲೇನ್‌ನಲ್ಲಿ ಪ್ರಯಾಣಿಸಲು ರಿಯಾಯಿತಿ ಪಡೆಯಲು
(4) ಆದಾಯ ತೆರಿಗೆ ಪ್ರಯೋಜನ ಪಡೆಯಲು
(5) ಸರ್ಕಾರದ ವಿವಿಧ ಯೋಜನೆಗಳಲ್ಲಿ ವೈದ್ಯಕೀಯ ಪ್ರಮಾಣ ಪತ್ರ ಸಲ್ಲಿಸಬೇಕಾದ ಸಂದರ್ಭಗಳಲ್ಲಿ ಗುರುತಿನ ಚೀಟಿಯನ್ನು ತೋರಿಸಿ/ನಕಲನ್ನು ನೀಡಿ ಪ್ರಯೋಜನ ಪಡೆಯಬಹುದು
(6) ರಾಜೀವ್‌ಗಾಂಧಿ, ಸ್ವರ್ಣರೋಜ್ಗಾರ್ ಯೋಜನೆ ಮುಂತಾದ ನಿವೇಶನ ಮತ್ತು ಮನೆಗಳನ್ನು ಪಡೆಯಲು.

ಸರ್ಕಾರವು ಪ್ರತಿ ಜಿಲ್ಲೆಯಲ್ಲಿ ವೈದ್ಯಕೀಯ ಮಂಡಳಿಯನ್ನು ರಚನೆ ಮಾಡಿರುವ ಹಿನ್ನೆಲೆಯಲ್ಲಿ ಗುರುತಿನ ಚೀಟಿಯಲ್ಲಿ ವೈದ್ಯಕೀಯ ಮಂಡಳಿಯ ಅಧ್ಯಕ್ಷರು/ಸದಸ್ಯರ ಹುದ್ದೆಗಳನ್ನು ನಮೂದಿಸಿ ಕನಿಷ್ಟ ಇಬ್ಬರು ಸದಸ್ಯರು ಸಹಿ ಮಾಡಲು ಹಾಗೂ ಇನ್ನು ಮುಂದೆ ಒಂದೇ ಬಣ್ಣದಲ್ಲಿ ಗುರುತಿನ ಚೀಟಿಯನ್ನು ಮುದ್ರಿಸಲು ಕ್ರಮ ಕೈಗೊಳ್ಳುವಂತೆ ಸೂಚಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎಂ. ಚಂದ್ರಮ್ಮ**

ಪಿ.ಆರ್. 789 ಸರ್ಕಾರದ ಅಧೀನ ಕಾರ್ಯದರ್ಶಿ, ಮಹಿಳಾ ಹಾಗೂ ಮಕ್ಕಳ ಅಭಿವೃದ್ಧಿ ಇಲಾಖೆ.

**ಕಾರ್ಮಿಕ ಸಚಿವಾಲಯ**

**ವಿಷಯ:** ಉದ್ಯೋಗ ಮತ್ತು ತರಬೇತಿ ಇಲಾಖೆಯಲ್ಲಿನ ಉದ್ಯೋಗ ವಿಭಾಗದಲ್ಲಿ ದಿನಾಂಕ: 1.4.2000 ರಂದು ಖಾಲಿ ಇದ್ದ ಹುದ್ದೆಗಳಲ್ಲಿ ಶೇಕಡ 80 ರಷ್ಟು ಹುದ್ದೆಗಳನ್ನು ರದ್ದುಗೊಳಿಸುವ ಬಗ್ಗೆ.

**ಓದಲಾಗಿದೆ:**
1. ಆದೇಶ ಸಂಖ್ಯೆ (1) ಸಿಆಸುಇ 6 ಇಕಾಅ 2000 ದಿನಾಂಕ: 4.10.2000.
2. ದಿನಾಂಕ: 30.10.2002 ರಂದು ರಾಜ್ಯ ಸರ್ಕಾರದ ಇಲಾಖೆಗಳಲ್ಲಿ ಶೇಕಡ 80 ರಷ್ಟು ಖಾಲಿ ಹುದ್ದೆಗಳನ್ನು ರದ್ದುಗೊಳಿಸುವ ಬಗ್ಗೆ ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳ ಕೊಠಡಿಯಲ್ಲಿ ನಡೆದ ಸಭೆಯ ನಡವಳಿಗಳು.
3. ನಿರ್ದೇಶಕರು, ಉದ್ಯೋಗ ಮತ್ತು ತರಬೇತಿ ಇಲಾಖೆ, ಬೆಂಗಳೂರು ಅವರ ಪತ್ರ ಸಂಖ್ಯೆ: ಉತನಿ: ಉದ್ಯೋಗ:ಆಡಳಿತ-1:ವಿವ-35:2002-03, ದಿನಾಂಕ: 29.4.2004.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ದಿನಾಂಕ: 4.12.2000ರ ಆದೇಶದಲ್ಲಿ 2000-2001ನೇ ಸಾಲಿನ ಆಯವ್ಯಯದ ಭಾಷಣದಲ್ಲಿ ಸನ್ಮಾನ್ಯ ಮುಖ್ಯ ಮಂತ್ರಿಗಳು ಪ್ರಸ್ತಾಪಿಸಲಾದಂತೆ ಸರ್ಕಾರದ ಇಲಾಖೆಗಳಲ್ಲಿ ಖಾಲಿ ಇರುವ ಸ್ಥಿತಿಯನ್ನು ವಿಮರ್ಶಿಸಿ ಅವುಗಳಲ್ಲಿ ಶೇಕಡ 80 ರಷ್ಟು ಹುದ್ದೆಗಳನ್ನು ರದ್ದುಗೊಳಿಸುವ ಬಗ್ಗೆ ಪರಿಶೀಲಿಸಲು ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳ ಅಧ್ಯಕ್ಷತೆಯಲ್ಲಿ ಕಾರ್ಯ ತಂಡವನ್ನು ರಚಿಸಲಾಗಿತ್ತು.

ಮೇಲೆ ಓದಲಾದ (2) ರಲ್ಲಿ ರಾಜ್ಯ ಸರ್ಕಾರದ ಇಲಾಖೆಗಳಲ್ಲಿ ಶೇಕಡ 80 ರಷ್ಟು ಖಾಲಿ ಹುದ್ದೆಗಳನ್ನು ರದ್ದುಗೊಳಿಸಲು ದಿನಾಂಕ: 30.10.2002ರ ನಡವಳಿಗಳಲ್ಲಿ ಉದ್ಯೋಗ ಮತ್ತು ತರಬೇತಿ ಇಲಾಖೆಯಲ್ಲಿ ಖಾಲಿ ಇರುವ ಹುದ್ದೆಗಳ ಶೇಕಡ 80 ರಷ್ಟು ಹುದ್ದೆಗಳನ್ನು ರದ್ದುಗೊಳಿಸುವ ಬಗ್ಗೆ ಸೂಕ್ತ ಪ್ರಸ್ತಾವನೆ ಕಳುಹಿಸುವಂತೆ ನಿರ್ದೇಶಕರು, ಉದ್ಯೋಗ ಮತ್ತು ತರಬೇತಿ ಇಲಾಖೆ ಇವರಿಗೆ ಸೂಚಿಸಲಾಗಿತ್ತು.

ಮೇಲೆ ಓದಲಾದ (3) ರಲ್ಲಿ ದಿನಾಂಕ: 29.4.2004ರ ಪತ್ರದಲ್ಲಿ ಉದ್ಯೋಗ ಮತ್ತು ತರಬೇತಿ ಇಲಾಖೆಯ ನಿರ್ದೇಶಕರು ಉದ್ಯೋಗ ವಿಭಾಗದಲ್ಲಿನ ದಿನಾಂಕ: 1.4.2000 ರಂದು ವಿವಿಧ ವೃಂದಗಳಲ್ಲಿ 115 ಖಾಲಿ ಹುದ್ದೆಗಳ ಪೈಕಿ ಶೇಕಡ 80 ರಂತೆ 92 ಹುದ್ದೆಗಳಿರುತ್ತವೆ. ಸರ್ಕಾರಿ ಆದೇಶ ಸಂಖ್ಯೆ: ಕಾಇ 48 ಇಟಿಎಕ್ಸ್ 2003, ದಿನಾಂಕ: 5.2.2004ರ ಆದೇಶದಲ್ಲಿ ಅಂಗವಿಕಲರ ವಿಶೇಷ ಉದ್ಯೋಗ ವಿನಿಮಯ ಕೇಂದ್ರಗಳನ್ನು ಪರಿಸಮಾಪ್ತಿಗೊಳಿಸಿದ ಪ್ರಯುಕ್ತ 22 ಹುದ್ದೆಗಳನ್ನು ರದ್ದುಗೊಳಿಸಿದ ಹಿನ್ನೆಲೆಯಲ್ಲಿ ಪ್ರಸ್ತುತ 70 ಖಾಲಿ ಹುದ್ದೆಗಳನ್ನು ರದ್ದುಗೊಳಿಸಬಹುದಾಗಿದೆ ಎಂದು ತಿಳಿಸುತ್ತಾ ರದ್ದುಗೊಳಿಸಬಹುದಾದ ಹುದ್ದೆಗಳ ವಿವರಗಳನ್ನು ದಿನಾಂಕ: 5.6.2004ರ ಪತ್ರದಲ್ಲಿನ ಅನುಬಂಧ-1 ರಲ್ಲಿ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಉದ್ಯೋಗ ಮತ್ತು ತರಬೇತಿ ಇಲಾಖೆಯ ಉದ್ಯೋಗ ವಿಭಾಗದಲ್ಲಿನ ದಿನಾಂಕ: 1.4.2000 ರಂದು ವಿವಿಧ ವೃಂದಗಳಲ್ಲಿ ಖಾಲಿ ಇದ್ದ ಒಟ್ಟು 90 ಹುದ್ದೆಗಳ ಪೈಕಿ 22 ಹುದ್ದೆಗಳು ಈಗಾಗಲೇ ರದ್ದುಪಡಿಸಲಾಗಿದ್ದು ಉಳಿದ 70 ಖಾಲಿ ಹುದ್ದೆಗಳನ್ನು ರದ್ದುಪಡಿಸಲು ತೀರ್ಮಾನಿಸಿದೆ.

ಆದುದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಕಾಇ 10 ಇಟಿಎಂ 2002, ಬೆಂಗಳೂರು, ದಿನಾಂಕ: 19ನೇ ಜುಲೈ 2004**

ಪ್ರಸ್ತಾವನೆಯಲ್ಲಿ ವಿವರಿಸಿದಂತೆ ಉದ್ಯೋಗ ಮತ್ತು ತರಬೇತಿ ಇಲಾಖೆಯಲ್ಲಿನ ಉದ್ಯೋಗ ವಿಭಾಗದಲ್ಲಿ ದಿನಾಂಕ: 1.4.2000 ರಂದು ಖಾಲಿ ಇದ್ದ ಹುದ್ದೆಗಳ ವಿವರಗಳನ್ನು ಇದರೊಂದಿಗೆ ಲಗತ್ತಿಸಿರುವ ಅನುಬಂಧದಲ್ಲಿ ನಮೂದಿಸಿರುವಂತೆ ವಿವಿಧ ವೃಂದಗಳ ಒಟ್ಟು 70 (ಎಪ್ಪತ್ತು) ಹುದ್ದೆಗಳನ್ನು ರದ್ದುಪಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್. ಸುಬ್ರಮಣ್ಯರಾವ್**

ಪೀಠಾಧಿಕಾರಿ, ಕಾರ್ಮಿಕ ಇಲಾಖೆ (ಉದ್ಯೋಗ ಮತ್ತು ತರಬೇತಿ).

**ಸರ್ಕಾರಿ ಆದೇಶ ಸಂಖ್ಯೆ: ಕಾಇ 10 ಇಟಿಎಂ 2002, ದಿನಾಂಕ: 19.7.2004ರ ಅನುಬಂಧ**

**ಉದ್ಯೋಗ ಮತ್ತು ತರಬೇತಿ ಇಲಾಖೆಯಲ್ಲಿನ ಉದ್ಯೋಗ ವಿಭಾಗದಲ್ಲಿ ದಿನಾಂಕ: 01.04.2000 ರಂದು ಖಾಲಿ ಇದ್ದ ಹುದ್ದೆಗಳಲ್ಲಿ ರದ್ದುಪಡಿಸಲಾದ ಹುದ್ದೆಗಳ ವಿವರ**

| ಕ್ರ. ಸಂ. | ಹುದ್ದೆಯ ಹೆಸರು | ಕಛೇರಿಯ ಹೆಸರು | ರದ್ದುಪಡಿಸಲಾದ ಹುದ್ದೆಗಳ ಸಂಖ್ಯೆ |
|---|---|---|---|
| 1 | 2 | 3 | 4 |
| 1) | ಸಿಸ್ಟಂ ಅನಾಲಿಸ್ಟ್ | ರಾಜ್ಯ ಉದ್ಯೋಗ ವಿನಿಮಯ ಕೇಂದ್ರಗಳ ಗಣಕ ಕೇಂದ್ರ, ಬೆಂಗಳೂರು. | 1 |
| | | ಒಟ್ಟು | **1** |
| 2) | ಉದ್ಯೋಗಾಧಿಕಾರಿ (ವೃತ್ತಿ ಮಾರ್ಗದರ್ಶನ) | 1) ಜಿಲ್ಲಾ ಉದ್ಯೋಗ ವಿನಿಮಯ ಕೇಂದ್ರ, ಬೀದರ್ | 1 |
| | | 2) ಜಿಲ್ಲಾ ಉದ್ಯೋಗ ವಿನಿಮಯ ಕೇಂದ್ರ, ಚಿತ್ರದುರ್ಗ. | 1 |
| | | 3) ಜಿಲ್ಲಾ ಉದ್ಯೋಗ ವಿನಿಮಯ ಕೇಂದ್ರ, ಬಳ್ಳಾರಿ | 1 |
| | | 4) ಜಿಲ್ಲಾ ಉದ್ಯೋಗ ವಿನಿಮಯ ಕೇಂದ್ರ, ಬಿಜಾಪುರ | 1 |
| | | 5) ಜಿಲ್ಲಾ ಉದ್ಯೋಗ ವಿನಿಮಯ ಕೇಂದ್ರ, ಚಿಕ್ಕಮಗಳೂರು | 1 |
| | | 6) ಜಿಲ್ಲಾ ಉದ್ಯೋಗ ವಿನಿಮಯ ಕೇಂದ್ರ, ಹಾಸನ | 1 |
| | | 7) ಜಿಲ್ಲಾ ಉದ್ಯೋಗ ವಿನಿಮಯ ಕೇಂದ್ರ, ಮಂಡ್ಯ | 1 |
| | | 8) ಜಿಲ್ಲಾ ಉದ್ಯೋಗ ವಿನಿಮಯ ಕೇಂದ್ರ, ಮಂಗಳೂರು | 1 |
| | | 9) ಜಿಲ್ಲಾ ಉದ್ಯೋಗ ವಿನಿಮಯ ಕೇಂದ್ರ, ಗುಲ್ಬರ್ಗಾ. | 1 |
| | | ಒಟ್ಟು | **09** |
| 3) | ಸಹಾಯಕ ಉದ್ಯೋಗಾಧಿಕಾರಿ | 1) ಉದ್ಯೋಗ ಮತ್ತು ತರಬೇತಿ ನಿರ್ದೇಶನಾಲಯ, ಬೆಂಗಳೂರು | 2 |
| | | 2) ಉಪ ಪ್ರಾದೇಶಿಕ ಉದ್ಯೋಗ ವಿನಿಮಯ ಕೇಂದ್ರ, ಬೆಂಗಳೂರು | 2 |
| | | 3) ಜಿಲ್ಲಾ ಉದ್ಯೋಗ ವಿನಿಮಯ ಕೇಂದ್ರ, (ಸಾಮಾನ್ಯ) ಬೆಂಗಳೂರು | 1 |
| | | 4) ಜಿಲ್ಲಾ ಉದ್ಯೋಗ ವಿನಿಮಯ ಕೇಂದ್ರ, (ತಾಂತ್ರಿಕ) ಬೆಂಗಳೂರು | 1 |
| | | 5) ಜಿಲ್ಲಾ ಉದ್ಯೋಗ ವಿನಿಮಯ ಕೇಂದ್ರ, ಬೀದರ್ | 1 |
| | | 6) ಜಿಲ್ಲಾ ಉದ್ಯೋಗ ವಿನಿಮಯ ಕೇಂದ್ರ, ಬಿಜಾಪುರ | 1 |
| | | 7) ಜಿಲ್ಲಾ ಉದ್ಯೋಗ ವಿನಿಮಯ ಕೇಂದ್ರ, ಗುಲ್ಬರ್ಗಾ | 1 |
| | | 8) ವಿಶಿಷ್ಠ ವೃತ್ತಿ ಮತ್ತು ಕಾರ್ಯನಿರ್ವಾಹಕ ಉದ್ಯೋಗ ವಿನಿಮಯ ಕೇಂದ್ರ, ಬೆಂಗಳೂರು | 1 |
| | | 9) ಅಂಗವಿಕಲರ ವಿಶೇಷ ಉದ್ಯೋಗ ವಿನಿಮಯ ಕೇಂದ್ರ, ಬೆಂಗಳೂರು | 1 |
| | | 10) ರಾಜ್ಯ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗಗಳ ವಿಶೇಷ ಉದ್ಯೋಗ ವಿನಿಮಯ ಕೇಂದ್ರ, ಬೆಂಗಳೂರು. | 1 |
| | | ಒಟ್ಟು | **12** |
| 4) | ಪ್ರಥಮ ದರ್ಜೆ ಸಹಾಯಕ | 1) ಉದ್ಯೋಗ ಮತ್ತು ತರಬೇತಿ ನಿರ್ದೇಶನಾಲಯ, ಬೆಂಗಳೂರು. | 1 |
| | | 2) ಜಿಲ್ಲಾ ಉದ್ಯೋಗ ವಿನಿಮಯ ಕೇಂದ್ರ, ಬಿಜಾಪುರ | 1 |
| | | 3) ಜಿಲ್ಲಾ ಉದ್ಯೋಗ ವಿನಿಮಯ ಕೇಂದ್ರ, ಬಾಗಲಕೋಟೆ | 1 |
| | | 4) ಜಿಲ್ಲಾ ಉದ್ಯೋಗ ವಿನಿಮಯ ಕೇಂದ್ರ, ಚಿತ್ರದುರ್ಗ | 1 |
| | | 5) ಜಿಲ್ಲಾ ಉದ್ಯೋಗ ವಿನಿಮಯ ಕೇಂದ್ರ, ಕೊಪ್ಪಳ | 1 |
| | | 6) ಜಿಲ್ಲಾ ಉದ್ಯೋಗ ವಿನಿಮಯ ಕೇಂದ್ರ, ಮಂಗಳೂರು | 1 |
| | | 7) ಜಿಲ್ಲಾ ಉದ್ಯೋಗ ವಿನಿಮಯ ಕೇಂದ್ರ, ಮಂಡ್ಯ | 1 |
| | | 8) ಜಿಲ್ಲಾ ಉದ್ಯೋಗ ವಿನಿಮಯ ಕೇಂದ್ರ, ರಾಯಚೂರು | 1 |
| | | 9) ಜಿಲ್ಲಾ ಉದ್ಯೋಗ ವಿನಿಮಯ ಕೇಂದ್ರ, ಗದಗ | 1 |
| | | 10) ಜಿಲ್ಲಾ ಉದ್ಯೋಗ ವಿನಿಮಯ ಕೇಂದ್ರ, ಹಾವೇರಿ | 1 |

| 1 | 2 | 3 | 4 |
|---|---|---|---|
| | | 11) ಜಿಲ್ಲಾ ಉದ್ಯೋಗ ವಿನಿಮಯ ಕೇಂದ್ರ, ಮಡಿಕೇರಿ | 1 |
| | | 12) ಜಿಲ್ಲಾ ಉದ್ಯೋಗ ವಿನಿಮಯ ಕೇಂದ್ರ, ಶಿವಮೊಗ್ಗ | 1 |
| | | 13) ಜಿಲ್ಲಾ ಉದ್ಯೋಗ ವಿನಿಮಯ ಕೇಂದ್ರ, ತುಮಕೂರು | 1 |
| | | 14) ಜಿಲ್ಲಾ ಉದ್ಯೋಗ ವಿನಿಮಯ ಕೇಂದ್ರ, ಹುಬ್ಬಳ್ಳಿ | 1 |
| | | 15) ಉದ್ಯೋಗ ವಿನಿಮಯ ಕೇಂದ್ರಗಳ (ಖಾಹುಕಲಿ) ಅಧಿನಿಯಮ ಜಾರಿ ಘಟಕ, ಮಂಗಳೂರು | 1 |
| | | 16) ವಿಶಿಷ್ಠ ವೃತ್ತಿ ಮತ್ತು ಕಾರ್ಯ ನಿರ್ವಾಹಕ ಉದ್ಯೋಗ ವಿನಿಮಯ ಕೇಂದ್ರ, ಬೆಂಗಳೂರು | 1 |
| | | 17) ವೃತ್ತಿ ಅಧ್ಯಯನ ಕೇಂದ್ರ, ಬೆಂಗಳೂರು. | 1 |
| | | ಒಟ್ಟು | 17 |
| 5) | ಶೀಘ್ರಲಿಪಿಗಾರ | 1) ಉದ್ಯೋಗ ಮತ್ತು ತರಬೇತಿ ನಿರ್ದೇಶನಾಲಯ, ಬೆಂಗಳೂರು | 1 |
| | | 2) ಅಂಗವಿಕಲರ ವಿಶೇಷ ಉದ್ಯೋಗ ವಿನಿಮಯ ಕೇಂದ್ರ, ಬೆಂಗಳೂರು | 1 |
| | | ಒಟ್ಟು | 2 |
| 6) | ಬೆರಳಚ್ಚುಗಾರ | 1) ಉಪ ಪ್ರಾದೇಶಿಕ ಉದ್ಯೋಗ ವಿನಿಮಯ ಕೇಂದ್ರ, ಬೆಂಗಳೂರು | 1 |
| | | 2) ಜಿಲ್ಲಾ ಉದ್ಯೋಗ ವಿನಿಮಯ ಕೇಂದ್ರ, (ಸಾಮಾನ್ಯ) ಬೆಂಗಳೂರು | 1 |
| | | ಒಟ್ಟು | 2 |
| 7) | ದ್ವಿತೀಯ ದರ್ಜೆ ಸಹಾಯಕ | 1) ಉಪ ಪ್ರಾದೇಶಿಕ ಉದ್ಯೋಗ ವಿನಿಮಯ ಕೇಂದ್ರ, ಬೆಂಗಳೂರು | 1 |
| | | 2) ವಿಶಿಷ್ಠ ವೃತ್ತಿ ಮತ್ತು ಕಾರ್ಯ ನಿರ್ವಾಹಕ ಉದ್ಯೋಗ ವಿನಿಮಯ ಕೇಂದ್ರ, ಬೆಂಗಳೂರು | 1 |
| | | 3) ಯೋಜನಾ ಉದ್ಯೋಗ ವಿನಿಮಯ ಕೇಂದ್ರ, ಕಾರವಾರ | 2 |
| | | 4) ಜಿಲ್ಲಾ ಉದ್ಯೋಗ ವಿನಿಮಯ ಕೇಂದ್ರ, ಬಾಗಲಕೋಟೆ | 1 |
| | | 5) ಜಿಲ್ಲಾ ಉದ್ಯೋಗ ವಿನಿಮಯ ಕೇಂದ್ರ, (ಸಾಮಾನ್ಯ), ಬೆಂಗಳೂರು | 2 |
| | | 6) ಜಿಲ್ಲಾ ಉದ್ಯೋಗ ವಿನಿಮಯ ಕೇಂದ್ರ, (ತಾಂತ್ರಿಕ), ಬೆಂಗಳೂರು | 1 |
| | | 7) ಜಿಲ್ಲಾ ಉದ್ಯೋಗ ವಿನಿಮಯ ಕೇಂದ್ರ, ಬೆಳಗಾವಿ | 1 |
| | | 8) ಜಿಲ್ಲಾ ಉದ್ಯೋಗ ವಿನಿಮಯ ಕೇಂದ್ರ, ದಾವಣಗೆರೆ | 1 |
| | | 9) ಜಿಲ್ಲಾ ಉದ್ಯೋಗ ವಿನಿಮಯ ಕೇಂದ್ರ, ರಾಯಚೂರು | 1 |
| | | ಒಟ್ಟು | 11 |
| 8) | ಗ್ರೂಪ್ 'ಡಿ' | 1) ಉದ್ಯೋಗ ಮತ್ತು ತರಬೇತಿ ನಿರ್ದೇಶನಾಲಯ, ಬೆಂಗಳೂರು | 1 |
| | | 2) ಯೋಜನಾ ಉದ್ಯೋಗ ವಿನಿಮಯ ಕೇಂದ್ರ, ಕಾರವಾರ | 1 |
| | | 3) ಜಿಲ್ಲಾ ಉದ್ಯೋಗ ವಿನಿಮಯ ಕೇಂದ್ರ, ಬೆಳಗಾವಿ | 1 |
| | | 4) ಜಿಲ್ಲಾ ಉದ್ಯೋಗ ವಿನಿಮಯ ಕೇಂದ್ರ, ಬಳ್ಳಾರಿ | 1 |
| | | 5) ಜಿಲ್ಲಾ ಉದ್ಯೋಗ ವಿನಿಮಯ ಕೇಂದ್ರ, ಬಿಜಾಪುರ | 1 |
| | | 6) ಜಿಲ್ಲಾ ಉದ್ಯೋಗ ವಿನಿಮಯ ಕೇಂದ್ರ, ಚಿಕ್ಕಮಗಳೂರು | 1 |
| | | 7) ಜಿಲ್ಲಾ ಉದ್ಯೋಗ ವಿನಿಮಯ ಕೇಂದ್ರ, ಚಿತ್ರದುರ್ಗ | 2 |
| | | 8) ಜಿಲ್ಲಾ ಉದ್ಯೋಗ ವಿನಿಮಯ ಕೇಂದ್ರ, ದಾವಣಗೆರೆ | 1 |
| | | 9) ಜಿಲ್ಲಾ ಉದ್ಯೋಗ ವಿನಿಮಯ ಕೇಂದ್ರ, ಹಾಸನ | 1 |
| | | 10) ಜಿಲ್ಲಾ ಉದ್ಯೋಗ ವಿನಿಮಯ ಕೇಂದ್ರ, ಹುಬ್ಬಳ್ಳಿ | 1 |
| | | 11) ಜಿಲ್ಲಾ ಉದ್ಯೋಗ ವಿನಿಮಯ ಕೇಂದ್ರ, ಕೋಲಾರ | 1 |
| | | 12) ಜಿಲ್ಲಾ ಉದ್ಯೋಗ ವಿನಿಮಯ ಕೇಂದ್ರ, ಮಂಗಳೂರು | 1 |
| | | 13) ಜಿಲ್ಲಾ ಉದ್ಯೋಗ ವಿನಿಮಯ ಕೇಂದ್ರ, ಶಿವಮೊಗ್ಗ | 1 |
| | | 14) ಜಿಲ್ಲಾ ಉದ್ಯೋಗ ವಿನಿಮಯ ಕೇಂದ್ರ, ತುಮಕೂರು | 2 |
| | | ಒಟ್ಟು | 16 |

ಎನ್. ಸುಬ್ರಮಣ್ಯರಾವ್

ಪಿ.ಆರ್. 790 ಪೀಠಾಧಿಕಾರಿ, ಕಾರ್ಮಿಕ ಇಲಾಖೆ (ಉದ್ಯೋಗ ಮತ್ತು ತರಬೇತಿ).

**PERSONNEL AND ADMINISTRATIVE REFORMS SECRETARIAT**

**CORRIGENDUM No. DPAR 13 SPS 2004, Bangalore, Dated: 19th July 2004**

In the fourth paragraph of Notification of even number dated: 17.07.2004, for the words "in the upgraded post", the words "by reviving the cadre post" shall be and shall always be deemed to have been substituted.

By Order and in the name of the Governor of Karnataka,

**B. V. KUMARASWAMY**

P.R. 791

Under Secretary to Government,

Department of Personnel and Administrative Reforms (Services-I).

**ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ**

ಅಧಿಸೂಚನೆ ಸಂಖ್ಯೆ: ಆಕುಕ 146 ಎಂಎಂಸಿ 2004, ಬೆಂಗಳೂರು, ದಿನಾಂಕ: 22ನೇ ಜುಲೈ 2004

1) ಬೆಂಗಳೂರು ವೈದ್ಯಕೀಯ ಕಾಲೇಜಿನ ಈ ಕೆಳಕಂಡ ನಿವೃತ್ತ ಪ್ರಾಧ್ಯಾಪಕರು : ಉಪನ್ಯಾಸಕರು : ಟ್ಯೂಟರ್‌ಗಳನ್ನು ಈ ತಕ್ಷಣದಿಂದ ಜಾರಿಗೆ ಬರುವಂತೆ 1977ರ ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಾವಳಿಯ 15(1)(ಬಿ)(ii) ನೇ ನಿಯಮದಡಿ ಗುತ್ತಿಗೆ ಆಧಾರದ ಮೇಲೆ ಅವರ ಹೆಸರುಗಳ ಮುಂದೆ ಸೂಚಿಸಿರುವ ಹುದ್ದೆಗಳಲ್ಲಿ 11 ತಿಂಗಳ ಅವಧಿಗೆ ಅಥವಾ ಮುಂದಿನ ಆದೇಶದವರೆಗೆ, ಯಾವುದು ಮುಂಚಿತವೋ ಅಲ್ಲಿಯವರೆಗೆ ನೇಮಿಸಲಾಗಿದೆ.

| ಕ್ರ. ಸಂ. | ನಿವೃತ್ತಿದಾರರ ಹೆಸರು ಮತ್ತು ಹಿಂದೆ ಹೊಂದಿದ್ದ ಹುದ್ದೆಯ ಹೆಸರು | ಗುತ್ತಿಗೆ ಆಧಾರದ ಮೇಲೆ ನೇಮಕಾತಿ ಮಾಡಿರುವ ಹುದ್ದೆಯ ಪದನಾಮ ಮತ್ತು ವೈದ್ಯಕೀಯ ಕಾಲೇಜು |
|---|---|---|
| 01 | ಡಾ: ವಿ.ವಿ. ಪವಾರ್<br>ನಿವೃತ್ತ ಇ.ಎನ್.ಟಿ. ಪ್ರಾಧ್ಯಾಪಕ<br>ಬೆಂಗಳೂರು ವೈದ್ಯಕೀಯ ಕಾಲೇಜು ,ಬೆಂಗಳೂರು | ಇ.ಎನ್.ಟಿ. ಪ್ರಾಧ್ಯಾಪಕರು ಬೆಂಗಳೂರು ವೈದ್ಯಕೀಯ ಕಾಲೇಜು, ಬೆಂಗಳೂರು |
| 02 | ಡಾ: ಸಿ.ಎನ್. ಶ್ರೀನಿವಾಸನ್<br>ನಿವೃತ್ತ ರೋಗಲಕ್ಷಣ ಶಾಸ್ತ್ರ ಪ್ರಾಧ್ಯಾಪಕ<br>ಬೆಂಗಳೂರು ವೈದ್ಯಕೀಯ ಕಾಲೇಜು , ಬೆಂಗಳೂರು | ರೋಗಲಕ್ಷಣ ಶಾಸ್ತ್ರ ಪ್ರಾಧ್ಯಾಪಕ<br>ಬೆಂಗಳೂರು ವೈದ್ಯಕೀಯ ಕಾಲೇಜು , ಬೆಂಗಳೂರು |
| 03 | ಡಾ: ಹೆಚ್. ರಂಗಪ್ಪ<br>ನಿವೃತ್ತ ರೋಗಲಕ್ಷಣಶಾಸ್ತ್ರ ಪ್ರಾಧ್ಯಾಪಕರು ಮತ್ತು ವೈದ್ಯಕೀಯ ಶಿಕ್ಷಣ ಉಪನಿರ್ದೇಶಕರು | ರೋಗಲಕ್ಷಣ ಶಾಸ್ತ್ರ ಪ್ರಾಧ್ಯಾಪಕ<br>ಬೆಂಗಳೂರು ವೈದ್ಯಕೀಯ ಕಾಲೇಜು , ಬೆಂಗಳೂರು |
| 04 | ಡಾ: ಎಂ.ಎಲ್. ಗುರುಶಾಂತು<br>ನಿವೃತ್ತ ಟಿ.ಬಿ. ಅಂಡ್ ಸಿಡಿ ಉಪನ್ಯಾಸಕ ಬೆಂಗಳೂರು ವೈದ್ಯಕೀಯ ಕಾಲೇಜು , ಬೆಂಗಳೂರು | ಟಿ.ಬಿ. ಅಂಡ್ ಸಿಡಿ ಉಪನ್ಯಾಸಕ ಬೆಂಗಳೂರು ವೈದ್ಯಕೀಯ ಕಾಲೇಜು , ಬೆಂಗಳೂರು |

2) ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ಇಲಾಖೆಯ ನಿವೃತ್ತ ಇ.ಎನ್.ಟಿ. ಹಿರಿಯ ತಜ್ಞ ಡಾ: ಆಸೀಫ್ ಅಲಿ ಜಾನ್ ರವರನ್ನು ಬೆಂಗಳೂರು ವೈದ್ಯಕೀಯ ಕಾಲೇಜಿನ ಇ.ಎನ್.ಟಿ. ಟ್ಯೂಟರ್ ಹುದ್ದೆಯಲ್ಲಿ ಈ ತಕ್ಷಣದಿಂದ ಜಾರಿಗೆ ಬರುವಂತೆ 11 ತಿಂಗಳ ಅವಧಿಗೆ ಅಥವಾ ಮುಂದಿನ ಆದೇಶದವರೆಗೆ ಯಾವುದು ಮುಂಚಿತವೋ ಅಲ್ಲಿಯವರೆಗೆ ಮಾತ್ರ 1977ರ ಕರ್ನಾಟಕ ನಾಗರೀಕ ಸೇವಾ(ಸಾಮಾನ್ಯ ನೇಮಕಾತಿ) ನಿಯಮಾವಳಿಯ 15(1)(ಬಿ)(ii) ನೇ ನಿಯಮದಡಿ ಗುತ್ತಿಗೆ ಆಧಾರದ ಮೇಲೆ ನೇಮಕ ಮಾಡಲಾಗಿದೆ.

3) ಗುತ್ತಿಗೆ ನೇಮಕಾತಿಯ ಷರತ್ತು ಮತ್ತು ನಿಬಂಧನೆಗಳನ್ನೊಳಗೊಂಡ ಸರ್ಕಾರಿ ಆದೇಶವನ್ನು ಪ್ರತ್ಯೇಕವಾಗಿ ಹೊರಡಿಸಲಾಗುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**Hàý. ¼ñYÊñnô**

ಪಿ.ಆರ್. 792

ಸರ್ಕಾರದ ಅಧೀನ ಕಾರ್ಯದರ್ಶಿ

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ವೈದ್ಯಕೀಯ ಶಿಕ್ಷಣ)

**ಶಿಕ್ಷಣ ಸಚಿವಾಲಯ**

**ವಿಷಯ:** ಶ್ರೀಮತಿ ಎಂ. ಅತೀಬಾ ಅಜರ್, ಭೌತಶಾಸ್ತ್ರ ಉಪನ್ಯಾಸಕರು, ಮಹಾರಾಣಿ ಮಹಿಳಾ ವಿಜ್ಞಾನ ಕಾಲೇಜು, ಮೈಸೂರು ಇವರನ್ನು ಸೇವೆಯಿಂದ ವಜಾ ಮಾಡುವ ಬಗ್ಗೆ.

**ಓದಲಾಗಿದೆ:** (1) ಕಾಲೇಜು ಶಿಕ್ಷಣ ಆಯುಕ್ತರ ಪತ್ರ ಸಂಖ್ಯೆ: ಕಾಶಿಆ 84 ಉಶಿನ 98 ಮೈವಿ ದಿನಾಂಕ: 20.06.2000

(2) ಕಾರಣ ಕೇಳುವ ನೋಟೀಸು ದಿನಾಂಕ: 27-12-2000

(3) ದಿನಾಂಕ: 05-03-2002 ಪತ್ರಿಕಾ ಪ್ರಕಟಣೆ

**ಪ್ರಸ್ತಾವನೆ:**

ಶ್ರೀಮತಿ ಎಂ. ಅತೀಬಾ ಅಜರ್, ಭೌತಶಾಸ್ತ್ರ ಉಪನ್ಯಾಸಕರು, ಮಹಾರಾಣಿ ಮಹಿಳಾ ವಿಜ್ಞಾನ ಕಾಲೇಜು, ಮೈಸೂರು ಇವರು ದಿನಾಂಕ: 28-08-1997 ರಿಂದ ಸರ್ಕಾರಿ ಸೇವೆಗೆ ಅನಧಿಕೃತವಾಗಿ ಗೈರುಹಾಜರಾಗಿರುತ್ತಾರೆ. ಅವರನ್ನು ಜುಲೈ 1998ರಲ್ಲಿ ಹಾಸನ ಸರ್ಕಾರಿ ವಿಜ್ಞಾನ ಕಾಲೇಜಿಗೆ ವರ್ಗಾವಣೆ ಮಾಡಲಾಗಿದ್ದು, ದಿನಾಂಕ: 06-08-98 ರಂದು

ಮೈಸೂರಿನ ಮಹಾರಾಣಿ ಮಹಿಳಾ ವಿಜ್ಞಾನ ಕಾಲೇಜಿನಲ್ಲಿ ಕರ್ತವ್ಯದಿಂದ ಬಿಡುಗಡೆ ಮಾಡಿದ್ದರೂ ವರ್ಗಾವಣೆಯಾದ ಕಾಲೇಜಿನಲ್ಲಿ ಕರ್ತವ್ಯಕ್ಕೆ ಹಾಜರಾಗದೇ ಇರುವುದಾಗಿ ಮೇಲ್ಕಂಡ ಕ್ರಮಾಂಕ (1) ರಲ್ಲಿ ಓದಲಾದ ದಿನಾಂಕ: 20–06–2000ರ ಪತ್ರದಲ್ಲಿ ಕಾಲೇಜು ಶಿಕ್ಷಣ ಆಯುಕ್ತರು ವರದಿ ಮಾಡಿದ್ದರು. ಇದರನ್ವಯ ಶ್ರೀಮತಿ ಎಂ. ಅತೀಬಾ ಅಜರ್ ಅವರಿಗೆ ಅವರ ವಿರುದ್ಧದ ಆರೋಪಗಳ ಬಗ್ಗೆ ಶಿಸ್ತು ಕ್ರಮದ ನಡವಳಿಗಳನ್ನು ಪ್ರಾರಂಭಿಸುವ ಬಗ್ಗೆ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಹಾಗೂ ಮೇಲ್ಮನವಿ) ನಿಯಮಗಳು 1957ರ ನಿಯಮ 11ರಡಿಯಲ್ಲಿ ದೋಷಾರೋಪಣಾ ಪಟ್ಟಿಯನ್ನು ದಿನಾಂಕ: 27–12–2000ದ ತಿಳುವಳಿಕೆ ಪತ್ರದೊಂದಿಗೆ ಜಾರಿ ಮಾಡಲು ಕಳುಹಿಸಲಾಗಿತ್ತಾದರೂ ಅದು ಸ್ವೀಕೃತವಾಗದೆ ವಾಪಸ್ಸು ಬಂದಿರುತ್ತದೆ. ಅವರಿಂದ ಯಾವುದೇ ಪ್ರತಿಕ್ರಿಯೆ ಬಾರದ ಕಾರಣ ಸರ್ಕಾರವು ಜನಪ್ರಿಯ ಪತ್ರಿಕೆಗಳಾದ ಜನವಾಹಿನಿ ಮತ್ತು ಕನ್ನಡ ಪ್ರಭ ಪತ್ರಿಕೆಗಳಲ್ಲಿ ದಿನಾಂಕ: 05–03–2002ರಂದು ಪ್ರಕಟಣೆ ನೀಡಿ ಅನಧಿಕೃತ ಗೈರುಹಾಜರಾತಿಗಾಗಿ ಕರ್ನಾಟಕ ನಾಗರೀಕ ಸೇವಾ ನಿಯಮ 108 ಹಾಗೂ ಸಿಸಿಎ ನಿಯಮ 14ರ ರೀತ್ಯಾ ಅದೇ ನಿಯಮಾವಳಿಯ ನಿಯಮ 8 (viii) ರ ಪ್ರಕಾರ ಸರ್ಕಾರಿ ಸೇವೆಯಿಂದ ವಜಾ ಮಾಡಬಾರದೇಕೆ ಎಂದು ಅಂತಿಮವಾಗಿ ಎಚ್ಚರಿಸಲಾಯಿತು. ಈ ಎಲ್ಲಾ ಪ್ರಕ್ರಿಯೆಗಳು ಜರುಗಿದ್ದಾಗ್ಯೂ ಶ್ರೀಮತಿ ಎಂ.ಅತೀಬಾ ಅಜರ್ ಅವರಿಂದ ಯಾವುದೇ ಮಾಹಿತಿ ಬಂದಿರುವುದಿಲ್ಲ ಹಾಗೂ ಅವರ ಬಗ್ಗೆ ಯಾವುದೇ ಮಾಹಿತಿ ತಿಳಿಯದ ಕಾರಣ ಅವರಿಗೆ ಸರ್ಕಾರಿ ಸೇವೆಯಲ್ಲಿ ಆಸಕ್ತಿ ಇಲ್ಲದಿರುವುದು ದೃಢಪಟ್ಟಿರುವುದರಿಂದ ಅವರ ವಿರುದ್ಧ ವಿಚಾರಣೆ ನಡೆಸದೆ ದಂಡನೆಯನ್ನು ಕರ್ನಾಟಕ ನಾಗರೀಕ ಸೇವಾ ನಿಯಮಗಳ 1958ರ ನಿಯಮ 108ರ ಹಾಗೂ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) 1957ರ ನಿಯಮ 14 ಹಾಗೂ ಅದೇ ನಿಯಮಾವಳಿಯ ನಿಯಮ 8 (viii) ರಡಿಯಲ್ಲಿ ಶ್ರೀಮತಿ ಎಂ.ಅತೀಬಾ ಅಜರ್, ಭೌತಶಾಸ್ತ್ರ ಉಪನ್ಯಾಸಕರು, ಇವರನ್ನು ಸೇವೆಯಿಂದ ವಜಾಗೊಳಿಸುವ ದಂಡನೆ ವಿಧಿಸಲು ಸರ್ಕಾರವು ಉದ್ದೇಶಿಸಿ, ಈ ಕೆಳಕಂಡಂತೆ ಆದೇಶಿಸಲು ನಿರ್ಣಯಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಇಡಿ 205 ಡಿಸಿಇ 2000, ಬೆಂಗಳೂರು ದಿನಾಂಕ: 19ನೇ ಜುಲೈ 2004.**

ಪ್ರಸ್ತಾವನೆಯಲ್ಲಿ ವಿವರಿಸಲಾದ ಕಾರಣಗಳಿಂದಾಗಿ ಶ್ರೀಮತಿ ಎಂ. ಅತೀಬಾ ಅಜರ್, ಭೌತಶಾಸ್ತ್ರ ಉಪನ್ಯಾಸಕರು, ಮಹಾರಾಣಿ ಮಹಿಳಾ ವಿಜ್ಞಾನ ಕಾಲೇಜು, ಮೈಸೂರು ಇವರು ದಿನಾಂಕ: 28–08–97 ರಿಂದ ಈವರೆವಿಗೆ ಸರ್ಕಾರಿ ಸೇವೆಗೆ ಅನಧಿಕೃತವಾಗಿ ಗೈರುಹಾಜರಾಗಿದ್ದಕ್ಕಾಗಿ ಕರ್ನಾಟಕ ನಾಗರೀಕ ಸೇವಾ ನಿಯಮಗಳು 1958ರ ನಿಯಮ 108ನ್ನು ಓದಿಕೊಂಡಂತೆ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 14ರ ರೀತ್ಯಾ ಹಾಗೂ 8 (viii) ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಮತ್ತೆ ಸರ್ಕಾರಿ ನೌಕರಿಯ ಪ್ರವೇಶಕ್ಕೆ ಸಾಮಾನ್ಯವಾಗಿ ಅನರ್ಹತೆಯಾಗತಕ್ಕ ರೀತಿಯಲ್ಲಿ ಶ್ರೀಮತಿ ಎಂ.ಅತೀಬಾ ಅಜರ್ ಅವರನ್ನು ಸರ್ಕಾರಿ ಸೇವೆಯಿಂದ ವಜಾ ಮಾಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಮೇರಿ ಜಾಯ್ಸ್**

ಪಿ.ಆರ್. 794 ಸರ್ಕಾರದ ಉಪ ಕಾರ್ಯದರ್ಶಿ–4, ಶಿಕ್ಷಣ ಇಲಾಖೆ.

## ಸಮಾಜ ಕಲ್ಯಾಣ ಸಚಿವಾಲಯ

**ವಿಷಯ:** ಹೊಸದಾಗಿ ಸೃಜಿಸಿರುವ ಬೆಂಗಳೂರು ಪೂರ್ವ ತಾಲ್ಲೂಕಿಗೆ ಹಿಂದುಳಿದ ವರ್ಗಗಳ ವಿಸ್ತರಣಾಧಿಕಾರಿ ಹುದ್ದೆಯನ್ನು ಸೃಜಿಸುವ ಆದೇಶ ಕುರಿತು.

**ಓದಲಾಗಿದೆ:** ದಿನಾಂಕ: 26.4.2004ಕ್ಕೆ ಪತ್ರ ವ್ಯವಹಾರ ಕೊನೆಗೊಂಡಂತೆ ಆಯುಕ್ತರು ಹಿಂದುಳಿದ ವರ್ಗಗಳ ಇಲಾಖೆರವರ ಪತ್ರ ಸಂಖ್ಯೆ: ಹಿಂವನಿ:ಸಿಬ್ಬಂದಿ-2:ಸಿಆರ್-132:01-02.

**ಪ್ರಸ್ತಾವನೆ:**

ಸರ್ಕಾರವು ಕಂದಾಯ ಇಲಾಖೆಯಲ್ಲಿ ಬೆಂಗಳೂರು ನಗರ ಜಿಲ್ಲೆಯಲ್ಲಿ ನೂತನವಾಗಿ ಬೆಂಗಳೂರು ಪೂರ್ವ ತಾಲ್ಲೂಕನ್ನು ಸೃಜಿಸಿದ್ದು, ಈ ತಾಲ್ಲೂಕಿಗೆ ಹಿಂದುಳಿದ ವರ್ಗಗಳ ಇಲಾಖೆಗೆ ಸಂಬಂಧಪಟ್ಟ ಕಾರ್ಯಕ್ರಮಗಳಾದ ಮೆಟ್ರಿಕ್-ಪೂರ್ವ ಮೆಟ್ರಿಕ್-ನಂತರದ ವಿದ್ಯಾರ್ಥಿನಿಲಯಗಳ ನಿರ್ವಹಣೆ, ಮೆಟ್ರಿಕ್-ಪೂರ್ವ, ಮೆಟ್ರಿಕ್-ನಂತರದ ವಿದ್ಯಾರ್ಥಿವೇತನಗಳ ಮಂಜೂರಾತಿ, ಶುಲ್ಕ ವಿನಾಯಿತಿ, ಬೆಳ್ಳಬೆಳಕು, ಮಾಂಗಲ್ಯಭಾಗ್ಯ, ಇತ್ಯಾದಿ ಕಾರ್ಯಕ್ರಮಗಳನ್ನು ಜಾರಿಗೊಳಿಸಲು ಹಿಂದುಳಿದ ವರ್ಗಗಳ ವಿಸ್ತರಣಾಧಿಕಾರಿ ಹುದ್ದೆಯ ಅಗತ್ಯ ಇರುತ್ತದೆ ಎಂಬುದಾಗಿ ತಿಳಿಸಿ, ಇದಲ್ಲದೆ, ಕರ್ನಾಟಕ ಹಿಂದುಳಿದ ವರ್ಗಗಳ ಅಭಿವೃದ್ಧಿ ನಿಗಮ ಹಾಗೂ ಕರ್ನಾಟಕ ಅಲ್ಪಸಂಖ್ಯಾತರ ಅಭಿವೃದ್ಧಿ ನಿಗಮಗಳು ಜಾರಿಗೊಳಿಸುವ ಕಾರ್ಯಕ್ರಮಗಳನ್ನು ಹಿಂದುಳಿದ ವರ್ಗಗಳ ವಿಸ್ತರಣಾಧಿಕಾರಿಗಳ ಮೇಲ್ವಿಚಾರಣೆಯಲ್ಲಿ ಅನುಷ್ಠಾನ ಗೊಳಿಸಬೇಕಾಗಿರುವುದರಿಂದ ಬೆಂಗಳೂರು ನಗರ ಜಿಲ್ಲೆಯಲ್ಲಿ ಹೊಸದಾಗಿ ಸೃಜಿಸಿರುವ ಬೆಂಗಳೂರು ಪೂರ್ವ ತಾಲ್ಲೂಕಿಗೆ ರೂ.5200-9580ರ ವೇತನಶ್ರೇಣಿಯಲ್ಲಿ ಹಿಂದುಳಿದ ವರ್ಗಗಳ ವಿಸ್ತರಣಾಧಿಕಾರಿ ಹುದ್ದೆಯನ್ನು ಸೃಜಿಸಲು ಆಯುಕ್ತರು ಹಿಂದುಳಿದ ವರ್ಗಗಳ ಇಲಾಖೆರವರು ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಆಯುಕ್ತರು ಹಿಂದುಳಿದ ವರ್ಗಗಳ ಇಲಾಖೆ ಇವರ ಪ್ರಸ್ತಾವನೆಯನ್ನು ಸರಕಾರವು ಕೂಲಂಕಷವಾಗಿ ಪರಿಶೀಲಿಸಿದೆ, ಆದುದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಸಕಇ 13 ಬಿಇಟಿ 2002 (ಭಾಗ), ಬೆಂಗಳೂರು, ದಿನಾಂಕ: 22ನೇ ಜುಲೈ 2004**

ಸರ್ಕಾರವು ಬೆಂಗಳೂರು ನಗರ ಜಿಲ್ಲೆಯಲ್ಲಿ ಹೊಸದಾಗಿ ಸೃಜಿಸಿರುವ ಬೆಂಗಳೂರು ಪೂರ್ವ ತಾಲ್ಲೂಕಿಗೆ ಹಿಂದುಳಿದ ವರ್ಗಗಳ ಇಲಾಖೆಗೆ ಸಂಬಂಧಪಟ್ಟಂತೆ ರೂ.5200-9580ರ ವೇತನ ಶ್ರೇಣಿಯಲ್ಲಿ ಒಂದು ಹಿಂದುಳಿದ ವರ್ಗಗಳ ವಿಸ್ತರಣಾಧಿಕಾರಿ ಹುದ್ದೆಯನ್ನು ಸರ್ಕಾರವು ಸೃಜಿಸಿ ಆದೇಶಿಸಿರುತ್ತದೆ.

ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಆಇ/276/ವೆಚ್ಚ-3/04, ದಿನಾಂಕ: 15.7.2004 ರಲ್ಲಿ ನೀಡಲಾದ ಸಹಮತಿ ಮೇರೆಗೆ ಈ ಆದೇಶ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಸ್. ಮರುಳಸಿದ್ದಯ್ಯ**

ಪಿ.ಆರ್. 793 ಸರ್ಕಾರದ ಅಧೀನ ಕಾರ್ಯದರ್ಶಿ, ಸಮಾಜ ಕಲ್ಯಾಣ ಇಲಾಖೆ.

**ಶಿಕ್ಷಣ ಸಚಿವಾಲಯ**

**ವಿಷಯ:** ಶ್ರೀ ವೈ.ಹೆಚ್.ಇ ಲಾಳ್, ಪ್ರಾಂಶುಪಾಲರು, ಸರ್ಕಾರಿ ಪದವಿ ಪೂರ್ವ ಕಾಲೇಜು,(ಕನ್ಯಾ) ಶಹಪುರ, ಹಾಗೂ ಶ್ರೀ ಎನ್.ಹೆಚ್.ಚಿಂಚೋಳಿ, ಪ್ರಾಂಶುಪಾಲರು, ಸಪಪೂಕ, ಶಹಪುರ, ಇ ವರುಗಳ ಮೇಲಿನ ಆರೋಪಗಳಿಗೆ ಶಿಸ್ತು ಕ್ರಮ.

**ಓದಲಾಗಿದೆ:**

1. ಸರ್ಕಾರಿ ಆದೇಶ ಸಂ:ಇ ಡಿ 8 ಡಿಜಿಡಬ್ಲ್ಯೂ 2002 ದಿ:18.4.2002.
2. ಸೂಚನಾ ಪತ್ರ ಸಂ:ಇ ಡಿ 8 ಡಿಜಿಡಬ್ಲ್ಯೂ 2002 ದಿ:3.4.2002.
3. ಸರ್ಕಾರಿ ಆದೇಶ ಸಂ:ಇ ಡಿ 8 ಡಿಜಿಡಬ್ಲ್ಯೂ 2002 ದಿ:7.9.2002.
4. ಉಪನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇ ಲಾಖೆ, ಗುಲ್ಬರ್ಗಾ, ಇ ವರ ವಿಚಾರಣಾ ವರದಿ ಸಂ:ಅ6: ಆಡಳಿತ:ವಿಚಾರಣೆ:2003-04 ದಿ:12.9.2003.
5. ಎರಡನೇ ಕಾರಣ ಕೇಳುವ ನೋಟೀಸ್ ಸಂ:ಇ ಡಿ 8 ಡಿಜಿಡಬ್ಲ್ಯೂ 2002 ದಿ:4.11.2003.
6. ಶ್ರೀ ಇ ಲಾಳ, ಇ ವರ ಪ್ರತಿರಕ್ಷಣಾ ಹೇಳಿಕೆ ದಿ:24.11.2003 ಹಾಗೂ ಶ್ರೀ ಚಿಂಚೋಳಿ ಇ ವರ ಹೇಳಿಕೆ ದಿ:24.11.2003

**ಪ್ರಸ್ತಾವನೆ:**

ವೃತ್ತಿ ಶಿಕ್ಷಣ ನಿರ್ದೇಶನಾಲಯವು Multi purpose Basic course ಅನ್ನು ನಡೆಸುತ್ತಿತ್ತು. Para Medical Board ಅಸ್ತಿತ್ವಕ್ಕೆ ಬಂದ ನಂತರ ಸದರಿ ಕೋರ್ಸನ್ನು ಸರ್ಕಾರವು ರದ್ದುಗೊಳಿಸಿ, ಈ ಕೋರ್ಸನ್ನು ಪದವಿ ಪೂರ್ವ ಶಿಕ್ಷಣ ಕಾಲೇಜುಗಳಲ್ಲಿ ಮುಂದುವರಿಸಬಾರದೆಂದು ದಿನಾಂಕ:11.3.98 ಸಂ:ಆವಿ1:ಪ್ಯಾಬೋ97 ರ ಜ್ಞಾಪನದ ಮೂಲಕ ಎಲ್ಲಾ ಕಾಲೇಜುಗಳಿಗೆ ನಿರ್ದೇಶಕರು ಸೂಚನೆ ನೀಡಿದ್ದರು. ಆದರೆ ಶ್ರೀ ವೈ.ಹೆಚ್.ಇ ಲಾಳ್, ಪ್ರಾಂಶುಪಾಲರು, ಸರ್ಕಾರಿ ಪದವಿ ಪೂರ್ವ ಕಾಲೇಜು,(ಕನ್ಯಾ) ಶಹಪುರ, ಇ ವರು ಸದರಿ ಕೋರ್ಸುಗಳನ್ನು ಮುಂದುವರೆಸುವ ಬಗ್ಗೆ ಪ್ಯಾರಾ ಮೆಡಿಕಲ್ ಬೋರ್ಡ್‌ನೊಂದಿಗೆ ಪತ್ರ ವ್ಯವಹರಿಸಿದ ನಂತರ ದಿನಾಂಕ:28.1.99 ಸಂಖ್ಯೆ: ಆಕುಕ 235 ಎಂಪಿಇ 98 ರ ಸರ್ಕಾರಿ ಆದೇಶದ ಮೂಲಕ ಕೋರ್ಸನ್ನು ಮಂಜೂರು ಮಾಡಿಸಿಕೊಂಡಿದ್ದು, ಸದರಿ ಮಂಜೂರಾತಿ ಆದೇಶದಲ್ಲಿ ವಿಧಿಸಲಾದ ಷರತ್ತುಗಳಲ್ಲಿ ಒಂದಾದ 14ನೇ ಷರತ್ತಿನ ಪ್ರಕಾರ ಸರ್ಕಾರದಿಂದ ಯಾವುದೇ ಆರ್ಥಿಕ ಸೌಲಭ್ಯ ಅಥವಾ ಅನುದಾನವನ್ನು ಸಂಸ್ಥೆಗೆ ನೀಡಲಾಗುವುದಿಲ್ಲವೆಂದು ಸ್ಪಷ್ಟವಾಗಿ ಸೂಚಿಸಿದ್ದಾಗ್ಯೂ ಸಹ ಸದರಿ ಕೋರ್ಸನ್ನು ಮುಂದುವರೆಸಿಕೊಂಡು ಹೋಗಿ ಅದನ್ನು ನಿರ್ವಹಿಸಲು ಅರೆಕಾಲಿಕ ಶ್ರಮಿಕ ಶಿಕ್ಷಕರಾದ ಶ್ರೀ ಗೋಪಾಲರಾವ್ ಇ ವರನ್ನು ನೇಮಕ ಮಾಡಿಕೊಂಡು ನಿಯಮಬಾಹಿರವಾಗಿ ಅವರ ಸೇವೆಯನ್ನು ಮುಂದುವರೆಸಿಕೊಂಡು ಹೋಗಿದ್ದು, ವೇತನ ಸಂಬಂಧದಲ್ಲಿ ಶ್ರೀ ಗೋಪಾಲರಾವ್ ಇ ವರು ಕೆಎಟಿ ಯಲ್ಲಿ ಅರ್ಜಿ ಸಂಖ್ಯೆ:1226:2001ನ್ನು ಸಲ್ಲಿಸಿದ್ದು ಪ್ರಕರಣವು ದಿನಾಂಕ:17.1.2002 ರಂದು ವಿಚಾರಣೆಗೆ ಬಂದು ಅರ್ಜಿಯನ್ನು ಅಂಗೀಕರಿಸಿದೆ. ಹಾಗೂ ದಿನಾಂಕ:13.2.2002 ರಂದು ನ್ಯಾಯಾಲಯದ ಮುಂದೆ ಹಾಜರಾಗುವಂತೆ ಶಿಕ್ಷಣ ಕಾರ್ಯದರ್ಶಿಯವರಿಗೆ ಹಾಗೂ ಕಾರ್ಯದರ್ಶಿ, ಮೆಡಿಕಲ್ ಕೌನ್ಸಿಲ್ ಇ ವರಿಗೂ ನ್ಯಾಯಾಲಯವು ನೋಟೀಸ್ ಜಾರಿ ಮಾಡಿತ್ತು. ನ್ಯಾಯಾಲಯವು ಆದೇಶಿಸಿದಂತೆ ಶ್ರೀ ಗೋಪಾಲರಾವ್ ಅರೆಕಾಲಿಕ ಶ್ರಮಿಕ ಶಿಕ್ಷಕರು ಕಾರ್ಯನಿರ್ವಹಿಸಿದ ಅವಧಿಗೆ ಸಂಭಾವನೆ ರೂ.45,000/-ಗಳನ್ನು ಸಂಬಂಧಪಟ್ಟ ಪ್ರಾಂಶುಪಾಲರಿಂದ ವಸೂಲಿ ಮಾಡಿ ಸರ್ಕಾರಕ್ಕೆ ಜಮೆ ಮಾಡುವ ಷರತ್ತಿಗೊಳಪಟ್ಟು ಮೇಲೆ ಓದಲಾದ ಕ್ರಮಾಂಕ (1) ರ ದಿನಾಂಕ: 18.4.2002 ರಂದು ಆದೇಶ ಹೊರಡಿಸಲಾಗಿತ್ತು. ಕೋರ್ಸನ್ನು ಪ್ರಾರಂಭಿಸಲು ಕಾರಣರಾಗಿದ್ದ ಶ್ರೀ ಇ ಲಾಳ್ ಹಾಗೂ ತದನಂತರ ಪ್ರಾಂಶುಪಾಲರಾಗಿ ಕಾರ್ಯಬಾರವಹಿಸಿಕೊಂಡಿದ್ದ ಶ್ರೀ ಚಿಂಚೋಳಿ ಇ ವರು ಕೋರ್ಸುಗಳನ್ನು ಮುಂದುವರೆಸಿಕೊಂಡು ಹೋಗಿರುವ ಹಿನ್ನಲೆಯಲ್ಲಿ ಈ ಇ ಬ್ಬರೂ ಪ್ರಾಂಶುಪಾಲರುಗಳು ನಿಯಮಬಾಹಿರವಾಗಿ ಕಾರ್ಯನಿರ್ವಹಿಸಲು ಹಾಗೂ ಸರ್ಕಾರಕ್ಕೆ ಆರ್ಥಿಕ ನಷ್ಟವನ್ನುಂಟುಮಾಡಲು ನೇರ ಕಾರಣರಾಗಿದ್ದಾರೆಂಬ ಆರೋಪದ ಮೇರೆಗೆ ಮೇಲೆ ಓದಲಾದ ಕ್ರಮಾಂಕ (2) ರಲ್ಲಿ ಆರೋಪಣಾ ಪಟ್ಟಿಯನ್ನು ಸೂಚನಾ ಪತ್ರದೊಂದಿಗೆ ಸಿಸಿಎ ನಿಯಮ 11 ರಡಿಯಲ್ಲಿ ಜಾರಿಗೊಳಿಸಿ, ಪ್ರತಿರಕ್ಷಣಾ ಹೇಳಿಕೆ ಸಲ್ಲಿಸಲು ಅವಕಾಶ ಕಲ್ಪಿಸಲಾಗಿತ್ತು. ಆಪಾದಿತರು ಸಲ್ಲಿಸಿದ್ದ ಪ್ರತಿರಕ್ಷಣಾ ಹೇಳಿಕೆಯಲ್ಲಿನ ಅಂಶಗಳನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ, ವಿವರವಾದ ವಿಚಾರಣೆ ನಡೆಸುವುದು ಸೂಕ್ತವೆಂದು ಸರ್ಕಾರವು ನಿರ್ಧರಿಸಿ, ಅದರಂತೆ ಮೇಲೆ ಓದಲಾದ ಕ್ರಮಾಂಕ:(3) ರಲ್ಲಿನ ಸರ್ಕಾರಿ ಆದೇಶದ ಮೂಲಕ ಉಪನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇ ಲಾಖೆ, ಗುಲ್ಬರ್ಗಾ, ಇ ವರನ್ನು ವಿಚಾರಣಾಧಿಕಾರಿ ಯನ್ನಾಗಿಯೂ ಹಾಗೂ ಶಿಕ್ಷಣಾಧಿಕಾರಿ, ಉಪನಿರ್ದೇಶಕರ ಕಚೇರಿ, ಸಾರ್ವಜನಿಕ ಶಿಕ್ಷಣ ಇ ಲಾಖೆ, ಗುಲ್ಬರ್ಗಾ, ಇ ವರನ್ನು ಮಂಡನಾಧಿಕಾರಿಯನ್ನಾಗಿ ನೇಮಕ ಮಾಡಲಾಗಿತ್ತು.

ಮೇಲೆ ಓದಲಾದ ಕ್ರಮಾಂಕ (4) ರ ದಿನಾಂಕ:12.9.2003 ರಲ್ಲಿ ವಿಚಾರಣಾಧಿಕಾರಿಗಳು ವಿಚಾರಣಾ ವರದಿಯನ್ನು ಸಲ್ಲಿಸಿ, ಆಪಾದಿತರುಗಳ ಮೇಲಿನ ಆರೋಪಗಳು ಸಾಬೀತಾಗಿದೆ ಎಂದು ನಿರ್ಣಯಿಸಿದ್ದರಿಂದ, ವಿಚಾರಣಾ ವರದಿಯನ್ನು 2ನೇ ಕಾರಣ ಕೇಳುವ ನೋಟೀಸ್ ಮೂಲಕ ಇಬ್ಬರು ಆಪಾದಿತ ಅಧಿಕಾಗಳಿಗೂ ದಿ:4.11.2003 ರಂದು ಜಾರಿಗೊಳಿಸಿ, ವಿಚಾರಣಾ ವರದಿಯಲ್ಲಿನ ನಿರ್ಣಯದ ಮೇಲೆ ಹೇಳಿಕೆ ಏನಾದರೂ ಸಲ್ಲಿಸುವುದಾದಲ್ಲಿ, ಹೇಳಿಕೆ ಸಲ್ಲಿಸಲು 15 ದಿವಸಗಳ ಅವಕಾಶ ಕಲ್ಪಿಸಲಾಗಿತ್ತು. ಆಪಾದಿತ ಅಧಿಕಾರಿಗಳು ಮೇಲೆ ಓದಲಾದ ಕ್ರಮಾಂಕ (5) ರಲ್ಲಿನ ದಿನಾಂಕಗಳಲ್ಲಿ ಪ್ರತಿರಕ್ಷಣಾ ಹೇಳಿಕೆ ಸಲ್ಲಿಸಿ, ಅವರುಗಳ ಮೇಲಿನ ಆರೋಪಗಳನ್ನು ಅಲ್ಲಗಳೆದಿದ್ದರು.

ವಿಚಾರಣಾ ವರದಿಯಲ್ಲಿನ ನಿರ್ಣಯ ಹಾಗೂ ಈ ನಿರ್ಣಯದ ಮೇಲೆ ಆಪಾದಿತ ಅಧಿಕಾರಿಗಳು ಸಲ್ಲಿಸಿದ್ದ ಪ್ರತಿರಕ್ಷಣಾ ಹೇಳಿಕೆಯಲ್ಲಿನ ಅಂಶಗಳನ್ನು ಕೂಲಂಕಷವಾಗಿ ಪರಿಶೀಲಿಸಲಾಗಿದೆ. ವಿಚಾರಣಾ ವರದಿಯಲ್ಲಿನ ನಿರ್ಣಯ ಹಾಗೂ ಅದಕ್ಕೆ ಪೂರಕವಾದ ದಾಖಲೆಗಳಂತೆ ಶ್ರೀ ಇ ಲಾಳ, ಪ್ರಾಂಶುಪಾಲರು, ಹಾಗೂ ಶ್ರೀ ಚಿಂಚೋಳಿ, ಇ ವರುಗಳು ನಿಯಮಬಾಹಿರವಾಗಿ Basic Health Sanitary Inspoctor course ಅನ್ನು ಮಂಜೂರಾತಿ ಮಾಡಿಸಿಕೊಂಡು ಮುಂದುವರೆಸಿಕೊಂಡು ಹೋಗಿರುವುದು ಹಾಗೂ ಈ ಕೋರ್ಸನ್ನು ನಿರ್ವಹಿಸಲು ಸರ್ಕಾರದಿಂದ ಯಾವುದೇ ಅನುದಾನ ನೀಡುವುದಿಲ್ಲವೆಂದು ಆದೇಶದ ಮೂಲಕ ಸಚಿವಾಲಯದ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇ ಲಾಖೆಯು ಷರತ್ತನ್ನು ವಿಧಿಸಿ, ತಿಳಿಸಿದ್ದರೂ ಸಹ ಶ್ರೀ ಗೋಪಾಲರಾವ್, ಅರೆಕಾಲಿಕ ಶ್ರಮಿಕ ಶಿಕ್ಷಕರು, ಇ ವರ ಸೇವೆಯನ್ನು ಪಡೆದುಕೊಂಡು ಸಂಭಾವನೆ ಪಾವತಿಸದೇ ಇ ದ್ದಾಗ, ಅವರು ಕರ್ನಾಟಕ ಆಡಳಿತ ನ್ಯಾಯಮಂಡಳಿಯಿಂದ ಆದೇಶ ತಂದು, ಸರ್ಕಾರದಿಂದ ಸಂಭಾವನೆ ಪಾವತಿಸಲು ಆಪಾದಿತರುಗಳು ನೇರವಾಗಿ ಜವಾಬ್ದಾರರಾಗಿರುವುದು ಇ ಲಾಖಾ ವಿಚಾರಣೆಯಿಂದ ಸಾಬೀತಾಗಿದೆ ಎಂಬ ನಿರ್ಣಯವನ್ನು ಸರ್ಕಾರವು ಸಂಪೂರ್ಣವಾಗಿ ಒಪ್ಪಿದೆ. ಆದ್ದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಇ ಡಿ 8 ಡಿಜಿಡಬ್ಲ್ಯೂ 2002, ಬೆಂಗಳೂರು, ದಿನಾಂಕ: 21ನೇ ಜುಲೈ 2004**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳ ಹಿನ್ನಲೆಯಲ್ಲಿ ಕೆಳಕಂಡ ಪ್ರಾಂಶುಪಾಲರುಗಳಿಗೆ ಅವರುಗಳ ಮುಂದೆ ನಮೂದಿಸಿರುವ ದಂಡನೆಯನ್ನು ವಿಧಿಸಿ, ಆದೇಶಿಸಿದೆ.

| ಅಧಿಕಾರಿಗಳ ಹೆಸರು | ವಿಧಿಸಿರುವ ದಂಡನೆ |
|---|---|
| ಶ್ರೀ ವೈ.ಹೆಚ್.ಇ ಲಾಳ್, ಪ್ರಾಂಶುಪಾಲರು, ಸರ್ಕಾರಿ ಪದವಿ ಪೂರ್ವ ಮಹಿಳಾ ಕಾಲೇಜು, ಶಹಪುರ, ಗುಲ್ಬರ್ಗಾ ಜಿಲ್ಲೆ. | ಕೆಸಿಎಸ್ (ಸಿಸಿಎ) ನಿಯಮಾವಳಿಗಳು 1957 ರ ನಿಯಮ 8(iv) ರನ್ವಯ ಸರ್ಕಾರಕ್ಕೆ ನಷ್ಟವುಂಟಾದ ರೂ.22,500/- (ಇ ಪ್ಪತ್ತೆರಡು ಸಾವಿರದ ಐದುನೂರು ರೂಪಾಯಿಗಳು ಮಾತ್ರ) ಗಳನ್ನು ವಸೂಲಿ ಮಾಡಿ ಸರ್ಕಾರಿ ಲೆಕ್ಕಕ್ಕೆ ಜಮಾ ಮಾಡಲು ಆದೇಶಿಸಿದೆ. ಹಾಗೂ ಸಿಸಿಎ ನಿಯಮ 8(iii)ರಡಿಯಲ್ಲಿ ಅವರ ಮುಂದಿನ 2 (ಎರಡು) ವಾರ್ಷಿಕ ಮುಂಬಡ್ತಿ ವೇತನವನ್ನು ಸಂಚಿತ ಪರಿಣಾಮದೊಂದಿಗೆ (with cumulative effect) ತಡೆಹಿಡಿಯುವ ದಂಡನೆ ವಿಧಿಸಿದೆ. |
| ಶ್ರೀ ಎನ್.ಹೆಚ್.ಚಿಂಚೋಳಿ, ಪ್ರಾಂಶುಪಾಲರು, ಸರ್ಕಾರಿ ಪದವಿ ಪೂರ್ವ ಕಾಲೇಜು, ಶಹಪುರ, ಗುಲ್ಬರ್ಗಾ ಜಿಲ್ಲೆ. | ಕೆಸಿಎಸ್ (ಸಿಸಿಎ) ನಿಯಮಾವಳಿಗಳು 1957ರ ನಿಯಮ 8(iv) ರನ್ವಯ ಸರ್ಕಾರಕ್ಕೆ ನಷ್ಟವುಂಟಾದ ರೂ.22,500/-(ಇ ಪ್ಪತ್ತೆರಡು ಸಾವಿರದ ಐದುನೂರು ರೂಪಾಯಿಗಳು ಮಾತ್ರ) ಗಳನ್ನು ವಸೂಲಿ ಮಾಡಿ ಸರ್ಕಾರಿ ಲೆಕ್ಕಕ್ಕೆ ಜಮಾ ಮಾಡಲು ಆದೇಶಿಸಿದೆ. ಹಾಗೂ ಸಿಸಿಎ ನಿಯಮ 8(iii)ರಡಿಯಲ್ಲಿ ಅವರ ಮುಂದಿನ 2 (ಎರಡು) ವಾರ್ಷಿಕ ಮುಂಬಡ್ತಿ ವೇತನವನ್ನು ಸಂಚಿತ ಪರಿಣಾಮದೊಂದಿಗೆ (with cumulative effect) ತಡೆಹಿಡಿಯುವ ದಂಡನೆ ವಿಧಿಸಿದೆ. |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಫ್.ಆರ್.ಸಂಬರಗಿ**

ಪಿ.ಆರ್. 795 ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇ ಲಾಖೆ. (ಸೇ-1,2)

**ವಿಷಯ:** ಶ್ರೀ ವೆಂಕಟಸ್ವಾಮಪ್ಪ, ಸಹಾಯಕ ನಿರ್ದೇಶಕರು, (ತಾಂತ್ರಿಕ) ಮುದ್ರಣ, ಲೇಖನ ಸಾಮಗ್ರಿ ಮತ್ತು ಪ್ರಕಟಣೆಗಳ ಇ ಲಾಖೆ, ಮಂಗಳೂರು, ಇ ವರ ಪ್ರಭಾರ ಭತ್ಯೆ ಮಂಜೂರಾತಿಯ ಬಗ್ಗೆ.

**ಓದಲಾಗಿದೆ:**
1. ದಿ:9.7.2003 ರ ಆದೇಶ ಸಂ:ಇ ಡಿ 49 ಡಿಜಿಒ 2003.
2. ನಿರ್ದೇಶಕರು, ಮುದ್ರಣ, ಲೇಖನ ಸಾಮಗ್ರಿ ಮತ್ತು ಪ್ರಕಟಣೆಗಳ ಇ ಲಾಖೆ, ಬೆಂಗಳೂರು, ಅವರ ಕಚೇರಿಯ ದಿ:4.2.2004 ರ ಪತ್ರ ಸಂಖ್ಯೆ:ಪಿ(ಪಿ)423:2003-04.
3. ದಿ:27.12.2003ರ ಆದೇಶ ಸಂ.ಇ ಡಿ 131 ಡಿಜಿಒ 2002.

**ಪ್ರಸ್ತಾವನೆ:**

ಮೇಲೆ ಕಾಣಿಸಿದ ದಿನಾಂಕ:4.2.2004 ರ ಪತ್ರದಲ್ಲಿ ಮುದ್ರಣ, ಲೇಖನ ಸಾಮಗ್ರಿ ಮತ್ತು ಪ್ರಕಟಣೆಗಳ ಇ ಲಾಖೆಯ ನಿರ್ದೇಶಕರು, ಶ್ರೀ ವೆಂಕಟಸ್ವಾಮಪ್ಪ ಅವರಿಗೆ ಕ್ರ.ಸಂ.(1) ರ ದಿನಾಂಕ:7.7.2003 ರ ಆದೇಶದಲ್ಲಿ ದಿನಾಂಕ:11.12.2000 ರಿಂದ 28.2.2003 ರವರೆಗೆ ಪ್ರಭಾರ ಭತ್ಯೆಯನ್ನು ಮಂಜೂರು ಮಾಡಲಾಗಿದ್ದು, ಕ್ರ.ಸಂ.(3) ರ ದಿನಾಂಕ:27.12.2003 ರ ಆದೇಶದಲ್ಲಿ ಅವರಿಗೆ ತಾಂತ್ರಿಕ ಸಹಾಯಕ ನಿರ್ದೇಶಕ ಹುದ್ದೆಗೆ ಸ್ಥಾನಪನ್ನ ಬಡ್ತಿ ನೀಡಿ, ಶಾಖಾ ಮುದ್ರಣಾಲಯ, ಮಂಗಳೂರು, ಇ ಲ್ಲಿಗೆ ನೇಮಕ ಮಾಡಲಾಗಿದೆಯಾದುದರಿಂದ, ಇ ವರನ್ನು ಸಹಾಯಕ ನಿರ್ದೇಶಕ ಹುದ್ದೆಯಲ್ಲಿ ಮುಂದುವರಿಸಿದ ಅವಧಿಗೆ ಅಂದರೆ ದಿನಾಂಕ:

1.3.2003 ರಿಂದ 27.12.2003 ರವರೆಗೆ ಪ್ರಭಾರ ಭತ್ಯೆಯನ್ನು ಮಂಜೂರು ಮಾಡುವಂತೆ ಪ್ರಸ್ತಾವನೆ ಕಳುಹಿಸಿದ್ದಾರೆ. ಈ ವಿಚಾರವನ್ನು ಪರಿಶೀಲಿಸಿದ ನಂತರ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ:ಇ ಡಿ 49 ಡಿಜಿಓ 2003 ಬೆಂಗಳೂರು, ದಿನಾಂಕ: 22ನೇ ಜುಲೈ 2004**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳ ಹಿನ್ನಲೆಯಲ್ಲಿ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳು 1958 ರ ನಿಯಮ 68 ರಂತೆ ಶ್ರೀ ವೆಂಕಟಸ್ವಾಮಪ್ಪ, ಮೇಲ್ವಿಚಾರಕರು, ಸರ್ಕಾರಿ ಕೇಂದ್ರ ಮುದ್ರಣಾಲಯ, ಬೆಂಗಳೂರು, ಇ ವರನ್ನು ಕೋಲಾರದಲ್ಲಿನ ಮುದ್ರಣ, ಲೇಖನ ಸಾಮಗ್ರಿ ಮತ್ತು ಪ್ರಕಟಣೆಗಳ ಇ ಲಾಖೆಯಲ್ಲಿನ ತಾಂತ್ರಿಕ ಸಹಾಯಕ ನಿರ್ದೇಶಕ ಹುದ್ದೆಯಲ್ಲಿ ಮುಂದುವರೆಸಿದ ಕಾರಣ ದಿನಾಂಕ:1.3.2003 ರಿಂದ 27.12.2003 ರ ಅವಧಿಗೆ ರೂ.5575-10620 ವೇತನ ಶ್ರೇಣಿಯಲ್ಲಿ ಕನಿಷ್ಠ ವೇತನದ ಶೇ.5 ರಷ್ಟನ್ನು ಪ್ರಭಾರ ಭತ್ಯೆಯಾಗಿ ಮಂಜೂರು ಮಾಡಲಾಗಿದೆ. (ಈ ಅವಧಿಯಲ್ಲಿ ಅವರು ರಜೆಯ ಮೇಲೆ ತೆರಳಿದ್ದಲ್ಲಿ ಅದನ್ನು ಹೊರತುಪಡಿಸಲಾಗಿದೆ)

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಫ್.ಆರ್.ಸಂಬರಗಿ**
ಪಿ.ಆರ್. 796 ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇ ಲಾಖೆ. (ಸೇ-1,2)

**ವಿಷಯ:** ಶ್ರೀ ಜೆ.ಜೆ.ದೊಡ್ಡಮನಿ, ಉಪನ್ಯಾಸಕರು, ಸರ್ಕಾರಿ ಶಿಕ್ಷಕರ ಶಿಕ್ಷಣ ಮಹಾವಿದ್ಯಾಲಯ, ಜಮಖಂಡಿ, ಬಾಗಲಕೋಟೆ ಜಿಲ್ಲೆ ಹಿಂದಿನ ಬಿಇ ಓ ಬಿಜಾಪುರ ಗ್ರಾಮೀಣ ವಲಯ ಇ ವರ ಮೇಲಿನ ಆರೋಪಗಳಿಗೆ ಶಿಸ್ತು ಕ್ರಮ-ಅಂತಿಮ ಆದೇಶ.

**ಓದಲಾಗಿದೆ:**
1. ಸೂಚನಾ ಪತ್ರ ಸಂ:ಇ ಡಿ 186 ಡಿಜಿಡಿ 2001 ದಿ:4.3.2002
2. ಶ್ರೀ ದೊಡ್ಡಮನಿ, ಇ ವರ ಪ್ರತಿರಕ್ಷಣಾ ಹೇಳಿಕೆ ದಿ:22.3.2002
3. ಸರ್ಕಾರಿ ಆದೇಶ ಸಂ:ಇ ಡಿ 186 ಡಿಜಿಡಿ 2001 ದಿ:17.9.2002
4. ಉಪನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇ ಲಾಖೆ, ಬಿಜಾಪುರ ಹಾಗೂ ವಿಚಾರಣಾಧಿಕಾರಿ ಇ ವರ ವಿಚಾರಣಾ ವರದಿ ಸಂಖ್ಯೆ:ಇ 1-2966-ಜೆಜೆಡಿ-ದೂರು-135/2002-03 ದಿ:7.12.2002.
5. ಸರ್ಕಾರಿ ಆದೇಶ ಸಂ:ಇ ಡಿ 186 ಡಿಜಿಡಿ 2001 ದಿ:20.1.2003.
6. ಉಪನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇ ಲಾಖೆ, ಬಿಜಾಪುರ ಹಾಗೂ ವಿಚಾರಣಾಧಿಕಾರಿ ಇ ವರ ವಿಚಾರಣಾ ವರದಿ ಸಂಖ್ಯೆ:ಇ 1-2966-ಜೆಜೆಡಿ-ದೂರು-135/2002-03 ದಿ:29.4.2003.
7. ಎರಡನೇ ಕಾರಣ ಕೇಳುವ ನೋಟೀಸ್ ಸಂ:ಇ ಡಿ 186 ಡಿಜಿಡಿ 2001 ದಿ:16.6.2003.
8. ಶ್ರೀ ದೊಡ್ಡಮನಿ ಇ ವರ ಪ್ರತಿರಕ್ಷಣಾ ಹೇಳಿಕೆ ದಿ:5.7.2003.

**ಪ್ರಸ್ತಾವನೆ:-**

ಶ್ರೀ ಜೆ.ಜೆ.ದೊಡ್ಡಮನಿ, ಉಪನ್ಯಾಸಕರು, ಸಿಟಿಇ ಜಮಖಂಡಿ ಇ ವರು ಬಿಜಾಪುರ ಗ್ರಾಮೀಣ ವಲಯದ ಕ್ಷೇತ್ರ ಶಿಕ್ಷಣಾಧಿಕಾರಿಯಾಗಿ ಕಾರ್ಯನಿರ್ವಹಿಸುತ್ತಿದ್ದಾಗ ಎಸಗಿದ್ದರೆನ್ನಲಾದ 13 ಆರೋಪಗಳಿಗೆ ಸರ್ಕಾರವು ಶಿಸ್ತುಪ್ರಾಧಿಕಾರಿಯಾಗಿ ಕಾರ್ಯನಿರ್ವಹಿಸಿ ಮೇಲೆ ಓದಲಾದ ಕ್ರಮಾಂಕ (1) ರಲ್ಲಿ ಕಾರಣ ಕೇಳುವ ನೋಟೀಸನ್ನು ಜಾರಿಗೊಳಿಸಲಾಗಿತ್ತು. ಆಪಾದಿತರು ದಿ:22.3.2002 ರ ಪ್ರತಿರಕ್ಷಣಾ ಹೇಳಿಕೆಯ ಮೂಲಕ ಎಲ್ಲಾ ಆರೋಪಗಳನ್ನು ಅಲ್ಲಗಳೆದಿದ್ದರಿಂದ ವಿವರವಾದ ವಿಚಾರಣೆ ನಡೆಸುವುದು ಸೂಕ್ತವೆಂದು ಸರ್ಕಾರವು ನಿರ್ಧರಿಸಿ ಮೇಲೆ ಓದಲಾದ ಕ್ರಮಾಂಕ (3) ರ ದಿ:17.9.2002 ರ ಸರ್ಕಾರಿ ಆದೇಶದ ಮೂಲಕ ಉಪನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇ ಲಾಖೆ, ಬಿಜಾಪುರ, ಇ ವರನ್ನು ವಿಚಾರಣಾಧಿಕಾರಿಯನ್ನಾಗಿಯೂ ಹಾಗೂ ಕ್ಷೇತ್ರ ಶಿಕ್ಷಣಾಧಿಕಾರಿ, ಬಿಜಾಪುರ, ಗ್ರಾಮೀಣ ವಲಯ, ಇ ವರನ್ನು ಮಂಡನಾಧಿಕಾರಿಯನ್ನಾಗಿ ನೇಮಕ ಮಾಡಲಾಗಿತ್ತು.

ವಿಚಾರಣಾಧಿಕಾರಿಗಳು ದಿ:7.12.2002 ರಂದು ವಿಚಾರಣಾ ವರದಿ ಸಲ್ಲಿಸಿದ್ದು, ವಿಚಾರಣಾ ವರದಿಯಲ್ಲಿ ಅನೇಕ ನ್ಯೂನ್ಯತೆಗಳಿದ್ದು, ವಿಚಾರಣೆಯನ್ನು ಸಿಸಿಎ ನಿಯಮಾನುಸಾರ ನಡೆಸಿಲ್ಲದಿರುವುದು ಕಂಡುಬಂದಿದ್ದರಿಂದ ಮೇಲೆ ಓದಲಾದ ಕ್ರಮಾಂಕ (5) ರ ದಿ:20.1.2003 ರ ಆದೇಶದ ಮೂಲಕ ಕೆಸಿಎಸ್ (ಸಿಸಿಎ) ನಿಯಮ 11-ಎ ಅಡಿ ಮುಂದುವರೆದ ವಿಚಾರಣೆಗೆ ಆದೇಶಿಸಲಾಗಿತ್ತು.

ವಿಚಾರಣಾಧಿಕಾರಿಗಳು ಮುಂದುವರೆದ ವಿಚಾರಣಾ ವರದಿಯನ್ನು ದಿ:29.4.2003 ರಂದು ಸಲ್ಲಿಸಿದ್ದು, ವಿಚಾರಣಾ ವರದಿಯಲ್ಲಿನ ನಿರ್ಣಯ ಹಾಗೂ ದಾಖಲೆಗಳನ್ನು ಪರಿಶೀಲಿಸಿದ ನಂತರ ಕೆಳಕಂಡ ಆಪಾದನೆಗಳು ಸಾಬೀತಾಗಿದ್ದರಿಂದ ಮೇಲೆ ಓದಲಾದ ಕ್ರಮಾಂಕ (7) ರ ದಿ:16.6.2003 ರಲ್ಲಿ ವಿಚಾರಣಾ ವರದಿಯನ್ನು 2ನೇ ಕಾರಣ ಕೇಳುವ ನೋಟೀಸ್ ಮೂಲಕ ಜಾರಿಗೊಳಿಸಿ, ಪ್ರತಿರಕ್ಷಣಾ ಹೇಳಿಕೆ ಸಲ್ಲಿಸಲು ಅವಕಾಶ ಕಲ್ಪಿಸಲಾಗಿತ್ತು.

| ಸಾಬೀತಾದ ಆರೋಪಗಳು | ವಿಚಾರಣಾ ವರದಿಯಲ್ಲಿನ ನಿರ್ಣಯ |
|---|---|
| **ಆರೋಪ-1**<br>2000-01 ನೇ ಸಾಲಿಗಾಗಿ ಶಾಲಾ ಮಕ್ಕಳಿಗೆ ಉಚಿತವಾಗಿ ಹಂಚಲು ಸರಬರಾಜು ಮಾಡಲಾಗಿದ್ದ ಸಮವಸ್ತ್ರಗಳ ಸ್ವೀಕೃತಿ ಮತ್ತು ವಿತರಣಾ ರಿಜಿಸ್ಟರ್ ನಲ್ಲಿ ಶಾಲಾ ಮುಖ್ಯೋಪಾಧ್ಯಾಯರಿಗೆ ಸಮವಸ್ತ್ರಗಳನ್ನು ವಿತರಿಸಿ ಅವರಿಂದ ಸ್ವೀಕೃತಿ ಬಗ್ಗೆ ಸಹಿ ಪಡೆದ ನಂತರ ರಿಜಿಸ್ಟರ್‌ನಲ್ಲಿ ಸಮ ವಸ್ತ್ರ ಹಂಚಿ ಕೆ ಅಂಕಿ ಅಂಶಗಳನ್ನು ತಿದ್ದುಪಡಿ ಮಾಡಿರುವುದು. | ಸಮವಸ್ತ್ರಗಳನ್ನು ಮುಖ್ಯ ಶಿಕ್ಷಕರುಗಳಿಗೆ ವಿತರಿಸಲಾಗಿದ್ದು, ಕೆಲವೊಂದು ಸಂದರ್ಭಗಳಲ್ಲಿ ಕೈತಪ್ಪಿನಿಂದ ಕಚೇರಿ ಕಾರ್ಯದ ಒತ್ತಡದಿಂದ ಅಂಕಿಗಳು ತಿದ್ದುಪಡಿಯಾಗಿದ್ದು ಕಂಡು ಬಂದಿದೆ. ಉದ್ದೇಶ ಪೂರ್ವಕವಾಗಿ ತಿದ್ದುಪಡಿ ಮಾಡಿದ್ದು ಕಂಡುಬಂದಿಲ್ಲ. |

| ಸಾಬೀತಾದ ಆರೋಪಗಳು | ವಿಚಾರಣಾ ವರದಿಯಲ್ಲಿನ ನಿರ್ಣಯ |
|---|---|
| **ಆರೋಪ-3**<br>2000-01 ನೇ ಸಾಲಿಗಾಗಿ 5 ರಿಂದ 7ನೇ ವರ್ಗದವರಿಗಿನ ಪರಿಶಿಷ್ಠ ಜಾತಿ ಪರಿಶಿಷ್ಠ ಪಂಗಡ ಗಳ ಹೆಣ್ಣುಮಕ್ಕಳಿಗೆ ಉಚಿತವಾಗಿ ಹಂಚಲು ಸರಬರಾಜಾದ ನೋಟ್ ಪುಸ್ತಕಗಳು ಸ್ಕೂಲ್‌ಬ್ಯಾಗ್‌ಗಳನ್ನು ಶಾಲಾ ಮುಖ್ಯೋ ಪಾಧ್ಯಾಯರಿಗೆ ಹಂಚಿದ ನಂತರ ಸ್ಟಾಕ್ ರಿಜಿಸ್ಟರ್‌ನಲ್ಲಿ ಅಂಕಿಗಳನ್ನು ತಿದ್ದುಪಡಿ ಮಾಡಿರುವುದು. | 5,286 ನೋಟು ಪುಸ್ತಕಗಳು ಸರಬರಾಜಾಗಿದ್ದು ಅವುಗಳನ್ನು ಮುಖ್ಯ ಶಿಕ್ಷಕರುಗಳಿಗೆ ವಿತರಿಸಿ ರುಜು ಪಡೆದಿದ್ದಾರೆ. 881 ಬ್ಯಾಗ್‌ಗಳನ್ನು ಸಹ ವಿತರಿಸಿರುವುದು ದಾಖಲೆಯಿಂದ ಕಂಡುಬಂದಿದೆ. ಅಂಕಿ ತಿದ್ದುಪಡಿಯು ಕೈತಪ್ಪಿನಿಂದ ಆಗಿದ್ದರೂ ಸಹ ಉದ್ದೇಶ ಪೂರ್ವಕವಾಗಿ ಆಗಿರುವುದಿಲ್ಲ ಎಂಬುದು ಸಿಬ್ಬಂದಿಗಳ ಹೇಳಿಕೆ ಹಾಗೂ ದಾಖಲೆಗಳಿಂದ ಕಂಡುಬಂದಿದೆ. |
| **ಆರೋಪ-5**<br>2001-02 ನೇ ಸಾಲಿಗೆ ಸರಬರಾಜಾದ ಎಲ್ಲಾ ಸಮವಸ್ತ್ರ ಬಟ್ಟೆಗಳನ್ನು ತಮ್ಮ ಅಧೀನದಲ್ಲಿ ಬರುವ 306 ಶಾಲೆಗಳಿಗೆ ವಿತರಿಸಲಾಗಿದ್ದು, ಕಾರ್ಯಾಲಯದಲ್ಲಿ ಯಾವುದೇ ರೀತಿ ಬಟ್ಟೆಗಳ ಶಿಲ್ಕು ಉಳಿದಿರುವುದಿಲ್ಲ ಅಂತ ನಿಮ್ಮ ಪ.ಸಂ: ಎ5.ಸಮವಸ್ತ್ರದ 2001-02 ದಿ: 3.8.2001 ರನ್ವಯ ಲಿಖಿತ ರೂಪದಲ್ಲಿ ಬರೆದುಕೊಟ್ಟಿರುತ್ತೀರಿ. ಆದರೆ ಸ್ಟೋರ್ ರೂಂ ಪರಿಶೀಲನೆ ಮಾಡಲಾಗಿ ಪ್ರಾಥಮಿಕ ಶಾಲಾ ಮಕ್ಕಳ ಸಲುವಾಗಿ ಸರಬರಾಜಾದ ಆಫ್ ಫ್ಯಾಂಟ್‌ಗಳ ಪೀಸ್‌ಗಳ ಪೈಕಿ 51 ಪೀಸ್‌ಗಳನ್ನು ಮತ್ತು 1 ರಿಂದ 4ನೇ ವರ್ಗದ ಹೆಣ್ಣು ಮಕ್ಕಳ ಸಲುವಾಗಿ ಸರಬರಾಜಾದ 540 ಜಗಾ ಪೀಸ್‌ಗಳನ್ನು ಅನ್ ಅಕೌಂಟ್ ಶಿಲ್ಕು ಇ ಟ್ಟುಕೊಂಡಿದ್ದು ದುರ್ನಡತೆ ಎಸಗಿರುವುದು. | ಸರಬರಾಜಾದ ಎಲ್ಲಾ ಸಮವಸ್ತ್ರ ಬಟ್ಟೆಗಳನ್ನು ತಾಲ್ಲೂಕಿನಲ್ಲಿ ಬರುವ ಎಲ್ಲಾ 306 ಶಾಲೆಗಳಿಗೆ ವಿತರಿಸಲಾಗಿದ್ದು, ಇ ದರ ಬಗ್ಗೆ ದಿ:3.8.2001 ರಂದು ಲಿಖಿತವಾಗಿ ಬರೆದು ಕೊಟ್ಟಿ ದ್ದಾರೆ. ಆದರೆ ಸದರಿ ದಿನಾಂಕದಂತೆ ಶಿಲ್ಕು ಉಳಿದ ಬಟ್ಟೆಗಳನ್ನು ವಿತರಿಸಬೇಕಾಗಿದ್ದು, ಬಟ್ಟೆಯ ವಿತರಣೆಯನ್ನು ಹಂಚುವ ಸಮಯದಲ್ಲಿ ಜಿಲ್ಲಾ ಪಂಚಾಯತ್ ಅಧಿಕಾರಿ ಗಳು, ಬಿಜಾಪುರ ಇ ವರು ಕಚೇರಿಗೆ ಆಕಸ್ಮಿಕ ಸಂದರ್ಶನ ನೀಡಿದಾಗ ಬಟ್ಟೆ ಗಳ ಶಿಲ್ಕು ಇ ದ್ದಿರುವುದು ಅವರ ಗಮನಕ್ಕೆ ಬಂದಿರುವುದು. ಆದರೆ ಬಟ್ಟೆಗಳನ್ನು ಅನ್ ಅಕೌಂಟ್ ಶಿಲ್ಕಿನಲ್ಲಿ ಇ ಟ್ಟುಕೊಂಡಿದ್ದು, ಯಾವುದೇ ದುರುದ್ದೇಶದಿಂದ ಕೂಡಿರುವುದಿಲ್ಲ. |
| **ಆರೋಪ-6**<br>ಪ್ರೌಢಶಾಲಾ ಹೆಣ್ಣುಮಕ್ಕಳಿಗೆ ಉಚಿತವಾಗಿ ಸಮವಸ್ತ್ರಗಳನ್ನು ಹಂಚುವ ಯೋಜನೆಯು 2001-02 ನೇ ಸಾಲಿನಿಂದ ಪ್ರಾರಂಭವಾಗಿದ್ದು ಸದರಿ ಸಾಲಿಗಾಗಿ ಸರಬರಾಜಾದ ಸಮವಸ್ತ್ರಗಳಲ್ಲಿ 1093 ಲಂಗ ಪೀಸ್‌ಗಳನ್ನು ಹಾಗೂ 116 ಜಂಪರ್ ಪೀಸ್‌ಗಳನ್ನು ಅನ್ ಅಕೌಂಟ್ ಆಗಿ ಶಿಲ್ಕು ಇ ಟ್ಟುಕೊಂಡಿದ್ದು ಲೆಕ್ಕದ ಪ್ರಕಾರ 1193 ಲಂಗ ಪೀಸುಗಳು 1193 ಜಂಪರ್ ಪೀಸ್ ಶಿಲ್ಕು ಉಳಿಯಬೇಕಾಗಿದ್ದು, 77 ಜಂಪರ್ ಪೀಸ್ ಗಳು ಕಡಿಮೆ ಇ ದ್ದು ಇ ದಕ್ಕೆ ಜವಾಬ್ದಾರರಾಗಿರುವುದು. | ಸರಬರಾಜಾದ ಸಮವಸ್ತ್ರಗಳಲ್ಲಿ 1193 ಲಂಗ ಪೀಸ್‌ಗಳನ್ನು ಹಾಗೂ 116 ಜಂಪರ್ ಪೀಸ್‌ಗಳನ್ನು ಅನ್ ಅಕೌಂಟ್ ಆಗಿ ಶಿಲ್ಕು ಇ ಟ್ಟುಕೊಂಡಿದ್ದರ ಬಗ್ಗೆ ಫರ್ಮ್‌ನಿಂದ ಪೂರೈಸಲಾದ ಬಟ್ಟೆಗಳಲ್ಲಿ ಕಡಿಮೆ ಪೂರೈಕೆ ಯಾಗಿದ್ದರಿಂದ 77 ಜಂಪರ್ ಪೀಸುಗಳು ಕಡಿಮೆ ಆಗಿರುವ ಬಗ್ಗೆ ದಾಖಲೆಗಳಿಂದ ಕಂಡುಬಂದಿದೆ. |
| **ಆರೋಪ-10**<br>ಬಿಜಾಪುರ ಗ್ರಾಮೀಣ ವಲಯದ ತಾಲ್ಲೂಕಿನ ಕ್ಷೇತ್ರ ಶಿಕ್ಷಣಾಧಿಕಾರಿಯಾಗಿ ಹಾಗೂ ಮುಖ್ಯಸ್ಥರಾಗಿ ಯಾವ ಸಿಬ್ಬಂದಿ ಏನು ಕೆಲಸ ಮಾಡುತ್ತಿದ್ದಾರೆ. ಎಷ್ಟು ಪತ್ರಗಳನ್ನು ಸ್ವೀಕರಿಸಿರುತ್ತಾರೆ, ಎಷ್ಟು ವಿಲೇವಾರಿ ಮಾಡಿರುತ್ತಾರೆ, ಎಷ್ಟು ಬಾಕಿ ಉಳಿಸಿರುತ್ತಾರೆ ಹಾಗೂ ಎಷ್ಟು ಕಡತಗಳನ್ನು ಬಾಕಿ ಉಳಿಸಿರುತ್ತಾರೆ. ಹಾಗೂ ಅವರೆಲ್ಲರೂ ಕಚೇರಿಯ ಪದ್ಧತಿಯ ಪ್ರಕಾರ ಕೆಲಸ ನಿರ್ವಹಿಸುತ್ತಿದ್ದಾರೆಯೇ ಅಥವಾ ಇ ಲ್ಲವೇ ಎಂಬ ಬಗ್ಗೆ ಒಂದು ದಿನವೂ ತಪಾಸಣೆ ಮಾಡಿರುವುದಿಲ್ಲ. ಅಗತ್ಯವಿರುವ ಕಡೆ ಸಿಬ್ಬಂದಿಗೆ ಮಾರ್ಗದರ್ಶನ ನೀಡಬೇಕಾಗಿದ್ದು ದಿ:3.8.2001 ರಂದು ಕೈಗೊಂಡ ತಪಾಸಣೆ ವೇಳೆಯಲ್ಲಿ ಸದರಿಯವರು ಯಾವ ಕ್ರಮ ನಿರ್ವಹಿಸದ ಕಾರಣ ಈ ಬಗ್ಗೆ ಜಿಲ್ಲಾ ಪಂಚಾಯತ್ ನಿಂದ ಕಾರಣ ಕೇಳಿ ಕೊಟ್ಟ ನೋಟೀಸಿಗೆ ಇ ವೆಲ್ಲವುಗಳನ್ನು ನೋಡುವ ಜವಾಬ್ದಾರಿ ಕಚೇರಿಯ ಅಧೀಕ್ಷಕರು ಮತ್ತು ವ್ಯವಸ್ಥಾಪಕ ಇ ವರದ್ದಾಗಿದ್ದು, ಇ ದರಲ್ಲಿ ತಮ್ಮದೇನೂ ಜವಾಬ್ದಾರಿ ಇ ರುವುದಿಲ್ಲವೆಂದು ಲಿಖಿತ ಹೇಳಿಕೆ ನೀಡಿರುವುದು. | ಕಚೇರಿಯ ಎಲ್ಲಾ ಸಿಬ್ಬಂದಿಗಳ ಕಾರ್ಯದ ಬಗ್ಗೆ ಉಸ್ತುವಾರಿ ಮಾಡಬೇಕಾದ ಜವಾಬ್ದಾರಿಯು ಬಿಇ ಒ ರವರದ್ದಾಗಿರುತ್ತದೆ. ಆದರೆ ಆಪಾದಿತರು ಇ ದನ್ನು ಮಾಡಿರುವುದು ಕಂಡು ಬರುವುದಿಲ್ಲ. ಕಚೇರಿಯ ಸಿಬ್ಬಂದಿ ಹಾಗೂ ಆಪಾದಿತ ಅಧಿಕಾರಿಗಳ ಮಧ್ಯೆ ಸಹಕಾರದ ಕೊರತೆ ಇ ದೆ. |

| ಸಾಬೀತಾದ ಆರೋಪಗಳು | ವಿಚಾರಣಾ ವರದಿಯಲ್ಲಿನ ನಿರ್ಣಯ |
|---|---|
| **ಆರೋಪ-11**<br>ಶಿಕ್ಷಕರ ಸೇವಾ ಪುಸ್ತಕಗಳಲ್ಲಿ ಅವರ ಗಳಿಕೆ ಮತ್ತು ಪರಿವರ್ತಿತ ರಜೆಗಳ ಲೆಕ್ಕವನ್ನು ಕಾಲೋಚಿತಗೊಳಿಸಿರುವುದಿಲ್ಲ. ಕೆಲವು ಶಿಕ್ಷಕರಿಗೆ ವಾರ್ಷಿಕ ವೇತನ ಬಡ್ತಿಗಳನ್ನು ಮಂಜೂರು ಮಾಡಿದ ಬಗ್ಗೆ ದಾಖಲೆ ಬರೆದಿಲ್ಲ. ಮತ್ತು ಬಹಳಷ್ಟು ಶಿಕ್ಷಕರು ಕಾಲಮಿತಿ ಮುಂಬಡ್ತಿ ಮಂಜೂರು ಮಾಡಲು ಅರ್ಜಿಗಳನ್ನು ಸಲ್ಲಿಸಿದ್ದು, ಅವುಗಳ ಬಗ್ಗೆ ಯಾವುದೇ ಕ್ರಮ ಜರುಗಿಸಿಲ್ಲ. | ಕಚೇರಿಯ ಸಿಬ್ಬಂದಿಯು ನಿಯಮಿತವಾಗಿ ಶಿಕ್ಷಕರುಗಳಿಗೆ ಸಿಗಬೇಕಾದ ಸೌಲಭ್ಯಗಳನ್ನು ನಿಯಮಾನುಸಾರ ಸಾದರ ಪಡಿಸಿದಾಗ ಇ ವುಗಳಿಗೆ ಅನಾವ ಶ್ಯಕವಾಗಿ ಆಕ್ಷೇಪಣೆಗಳನ್ನು ಮಾಡಿ ವಿಳಂಬಕ್ಕೆ ಕಾರಣರಾಗಿದ್ದಾರೆ. ಇ ಲ್ಲಿ ಕಚೇರಿಯ ಸಿಬ್ಬಂದಿ ಹಾಗೂ ಅಧಿಕಾರಿಗಳಲ್ಲಿಯ ಸಹಕಾರದ ಕೊರತೆ ಕಂಡುಬರುತ್ತದೆ. |
| **ಆರೋಪ-12**<br>ಶ್ರೀ ಡಿ.ಎಂ.ದೇವಕತೆ, ದೈಹಿಕ ಶಿಕ್ಷಣಾಧಿಕಾರಿ, ಶ್ರೀ ಸಿ.ಎಸ್. ಸಜ್ಜನ್, ಶಿಕ್ಷಣ ಸಂಯೋಜಕರು, ಶ್ರೀ ಎಸ್.ಎನ್.ಅವಟಿ, ಶಿಕ್ಷಣ ಸಂಯೋಜಕರು ಹಾಗೂ ಶ್ರೀಮತಿ ಜೆ.ಟಿ.ಕಾಲೇಬಾಗ, ಈ ನಾಲ್ಕು ಸಿಬ್ಬಂದಿ ಗಳು ಕಾರ್ಯನಿರ್ವಾಹಕ ನೌಕರರಾಗಿದ್ದು, ಇ ವರೆಲ್ಲರೂ ಏಪ್ರಿಲ್ 2001 ರಿಂದ ಜುಲೈ 2001 ರವರೆಗಿನ ತಮ್ಮ ದಿನಚರಿ ಗಳನ್ನು ಸಲ್ಲಿಸಿರುವುದಿಲ್ಲ. ಈ ಬಗ್ಗೆಯೂ ಸಹ ನೀವು ಮೇಲಾಧಿಕಾರಿಗಳಾಗಿ ಯಾವುದೇ ಉಸ್ತುವಾರಿ ನಡೆಸಿಲ್ಲ. | ಕಚೇರಿಯ 4 ಶಿಕ್ಷಣ ಸಂಯೋಜಕರುಗಳು ನಿಯಮಿತವಾಗಿ ಅವರುಗಳ ದಿನಚರಿಯನ್ನು ನಿಗದಿತ ಸಮಯದಲ್ಲಿ ಸಲ್ಲಿಸದಿದ್ದರೂ ಸಹ ಇ ವರುಗಳಿಗೆ ಯಾವುದೇ ಜ್ಞಾಪನಾ ಗಳನ್ನು ನೀಡದೆ ಇ ರುವುದು. ಹಾಗೂ ತಮ್ಮ ದಿನಚರಿಯನ್ನು ಪ್ರತಿ ತಿಂಗಳು ನಿಯಮಿತವಾಗಿ ಸಲ್ಲಿಸಿ ಅನುಮೋದನೆ ಪಡೆದು ಕೊಂಡಿದ್ದು ಕಂಡುಬರುವುದಿಲ್ಲ. |
| **ಆರೋಪ-13**<br>ಮೇಲ್ಕಂಡ ಆಪಾದನೆಗಳ ಬಗ್ಗೆ ರಕ್ಷಣಾ ಹೇಳಿಕೆಯನ್ನು ನೀಡಲು ಜಿಲ್ಲಾ ಪಂಚಾಯತ್ ಕಾರ್ಯಾಲಯದ ಪ.ಸಂ:ಜಿಪಯೋ:ತನಿಖೆ: ಸಿಆರ್: 2001-02, ದಿನಾಂಕ: 6.8.2001 ರನ್ವಯ ಕಾರಣ ಕೇಳಿ ಕೊಟ್ಟ ನೋಟೀಸಿಗೆ ನೀವು ತಾಲ್ಲೂಕು ಮಟ್ಟದ ಜವಾಬ್ದಾರಿ ಅಧಿಕಾರಿ ಎಂಬುದನ್ನು ಮರೆತು ಕಾರ್ಯಾಲಯದಲ್ಲಿ ಆಗುವ ಎಲ್ಲಾ ಆಗು ಹೋಗುಗಳಿಗೆ ನಿಮ್ಮ ಯಾವುದೇ ಜವಾಬ್ದಾರಿ ಇ ಲ್ಲವೆಂದು ಲಿಖಿತ ಹೇಳಿಕೆಯಿಂದ ಕಂಡುಬಂದು ಸರ್ಕಾರಿ ನೌಕರರಿಗೆ ಸಲ್ಲದ ರೀತಿಯಲ್ಲಿ ವರ್ತಿಸಿರುವುದು. | ಆಪಾದಿತರು ತಮ್ಮ ಜವಾಬ್ದಾರಿಯನ್ನು ಅರಿತು ಕೊಳ್ಳ ಬೇಕಾಗುತ್ತದೆ. ಕಚೇರಿಯ ಕಾರ್ಯಕಲಾಪಗಳ ನಿರ್ವಹಣೆ ದೋಷಗಳನ್ನು ಮತ್ತೊಬ್ಬರ ಮೇಲೆ ಹಾಕುವುದು ಸರಿಯಾದ ಕ್ರಮವಲ್ಲ. |

ಆಪಾದಿತರು ಮೇಲೆ ಓದಲಾದ 8 ರಲ್ಲಿನ ದಿನಾಂಕ:5.7.2003 ರಂದು ಪ್ರತಿರಕ್ಷಣಾ ಹೇಳಿಕೆ ಸಲ್ಲಿಸಿ ಸಾಬೀತಾಗಿದೆ ಎಂದು ತಿಳಿಸಲಾದ ಮೇಲ್ಕಂಡ ಆರೋಪಗಳನ್ನು ಅಲ್ಲಗಳೆದಿದ್ದಾರೆ. ವಿಚಾರಣಾ ವರದಿಯಲ್ಲಿನ ನಿರ್ಣಯ, ಪೂರಕ ದಾಖಲೆ ಹಾಗೂ ಆಪಾದಿತರ ಪ್ರತಿರಕ್ಷಣಾ ಹೇಳಿಕೆಯಲ್ಲಿನ ಅಂಶಗಳನ್ನು ಪರಿಶೀಲಿಸಿದಾಗ ಸರ್ಕಾರವು ಹಮ್ಮಿಕೊಂಡಿರುವ ಮಹತ್ತರ ಯೋಜನೆಯಾದ ಮಕ್ಕಳಿಗೆ ಸಮವಸ್ತ್ರ ಸರಬರಾಜು, 5 ರಿಂದ 7ನೇ ವರ್ಗದವರೆಗಿನ ಪರಿಶಿಷ್ಠಜಾತಿ/ಪಂಗಡಗಳ ಹೆಣ್ಣುಮಕ್ಕಳಿಗೆ ಉಚಿತವಾಗಿ ಹಂಚಲು ಸರಬರಾಜಾದ ನೋಟ್ ಪುಸ್ತಕಗಳು ಹಾಗೂ ಸ್ಕೂಲ್ ಬ್ಯಾಗ್‌ಗಳನ್ನು ಸಮರ್ಪಕವಾಗಿ ವಿತರಿಸದೆ ಶಾಲಾ ಬಡಮಕ್ಕಳಿಗೆ ದೊರೆಯಬೇಕಾದ ಇ ಂತಹ ಸೌಲಭ್ಯಗಳಿಂದ ವಂಚಿತರನ್ನಾಗಿಸಲು ನೇರ ಕಾರಣರಾಗಿರುವರಲ್ಲದೆ, ಸರ್ಕಾರವು ಹಮ್ಮಿಕೊಂಡಿದ್ದ ಶೈಕ್ಷಣಿಕ ಅಭಿವೃದ್ಧಿಯ ಯೋಜನೆ ಅನುಷ್ಠಾನಗೊಳಿಸುವ ದಿಕ್ಕಿನಲ್ಲಿ ಆಪಾದಿತ ಅಧಿಕಾರಿಯು ಸಂಪೂರ್ಣವಾಗಿ ವಿಫಲರಾಗಿರುವುದು ಸಾಬೀತಾಗಿದೆ. ಆದ್ದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಇ ಡಿ 186 ಡಿಜಿಡಿ 2001, ಬೆಂಗಳೂರು, ದಿನಾಂಕ: 21ನೇ ಜುಲೈ 2004**

ಪ್ರಸ್ತಾವನೆಯಲ್ಲಿ ವಿವರಿಸಲಾದ ಕಾರಣಗಳ ಹಿನ್ನೆಲೆಯಲ್ಲಿ ಶ್ರೀ ಜೆ.ಜೆ.ದೊಡ್ಡಮನಿ, ಉಪನ್ಯಾಸಕರು, ಸರ್ಕಾರಿ ಶಿಕ್ಷಕರ ಶಿಕ್ಷಣ ಮಹಾವಿದ್ಯಾಲಯ, ಜಮಖಂಡಿ, ಬಾಗಲಕೋಟೆ ಜಿಲ್ಲೆ, ಇ ವರ ಮೇಲಿನ ಸಾಬೀತಾದ ಆರೋಪಗಳಿಗೆ ಕೆಸಿಎಸ್ (ಸಿಸಿಎ) ನಿಯಮಾವಳಿಗಳು 1957 ರ ನಿಯಮ 9 ರಲ್ಲಿನ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಅದೇ ನಿಯಮಾವಳಿಗಳ ನಿಯಮ 8(iii) ಅಡಿಯಲ್ಲಿ ಸದರಿಯವರ ಮುಂದಿನ 2 ವಾರ್ಷಿಕ ಮುಂಬಡ್ತಿ ವೇತನವನ್ನು ಸಂಚಿತ ಪರಿಣಾಮ ಬೀರುವಂತೆ (with cumulative effect) ತಡೆಹಿಡಿಯುವ ದಂಡನೆ ವಿಧಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಫ್.ಆರ್.ಸಂಬರಗಿ**

ಪಿ.ಆರ್. 797 ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇ ಲಾಖೆ. (ಸೇ-1,2)

**FINANCE SECRETARIAT**

**Subject:** Constitution of an 'Apex Audit Committee' under the Chairmanship of the Chief Secretary to discuss the issues raised in the Draft Audit Report.

**Ref:**
1. D.O. Letter No. 75-Audit/(AP)/8-2003 dated 4-6-2004 of Comptroller and Auditor General of India addressed to Hon'ble Chief Minister of Karnataka.
2. Principal Accountant General (Audit) I letter No Pr.(Au)-I/Reports(ZP)/A-1/2004-05/62 dated July 7, 2004.

**READ:**

In demi-official letter referred to above the Comptroller and Auditor General of India has highlighted the non-receipt of comments of the Government, within the stipulated time, **to the draft audit paragraphs and performance reviews proposed to be included in the Audit Report.** The CAG has also drawn attention to the fact that number of issues still figure in the Audit Reports, which could have been avoided if due care had been taken to clarify the issues raised therein in time. The CAG, therefore, suggests an institutional arrangement be put in place wherein the Chief Secretary and the concerned administrative Secretaries can meet when the draft Audit Report is ready and discuss the issues raised in the draft Audit Reports with the Principal Accountant General/Accountant General and his officers so that the views/comments of the Government could be effectively included and a more rounded view taken in the Audit Reports.

There is no doubt response of the departments to furnishing comments within 6 weeks to the draft audit paragraphs and performance reviews to be included in the Audit Report is very poor. In view of this most draft paragraphs get included in the final Audit Report that might otherwise have been dropped if the comments had been sent in time. A database of the draft paragraphs and performance reviews to be included in the Audit Reports is being created to track the response of the departments.

As an institutional arrangement to discuss the issues raised in the draft Audit Report it has been decided to constitute an **'Apex Audit Committee'** under the chairmanship of the Chief Secretary, which will meet once a year (August –September ) when the draft Audit Report is ready and discuss the issues raised in the draft Audit Report.

It is also decided that before the 'Apex Audit Committee' meets preliminary meeting is to be held under the chairmanship of the Secretary to Government in the concerned Administrative Department as and when the draft Audit Report pertaining to the concerned department is ready and discuss the issues raised in the draft Audit Report in the **'Departmental Audit Committee'** and ensure compliance within the stipulated time to the Principal Accountant General/Accountant General.

After examining all aspects of the above subject, the Government issues orders as follows: -

**GOVERNMENT ORDER No. FD 3 CAM 2004 DATED: 19th JULY 2004.**

Government constitutes the following two committees and they are as follows: -

The composition of the **'Apex Audit Committee**' shall be as follows:

| | | |
|---|---|---|
| 1. | Chief Secretary | Chairman |
| 2. | Secretaries to Government in the concerned Administrative Departments. | Members |
| 3. | The ACS&PS to Government, Finance Department | Member |
| 4. | The Principal Accountant General/ Accountant General. | Member |
| 5. | The Controller (AM) & Ex-officio Secretary to Government, Finance Department. | Member |

The 'Apex Audit Committee' will meet once a year (August-September) when the draft Audit Report is ready and discuss the issues raised in the Audit Reports.

The composition of the **'Departmental Audit Committee**' shall be as follows:

| | | |
|---|---|---|
| 1. | Secretary to Government in the concerned Administrative Department. | Chairman |
| 2. | The Head of the Department concerned | Member |
| 3. | The Controller (AM) & E/o Secretary to Govt., Finance Department. | Member |
| 4. | Senior Deputy Accountant General/Deputy Accountant General nominated by the Accountant General | Member |
| 5. | IFA of the Department (wherever IFA's are there) | Member |

The 'Departmental Audit Committee' will meet before the 'Apex Audit Committee' meets as and when the draft Audit Report pertaining to the concerned department is ready and discuss the issues raised in the draft Audit Report.

The Controller (Accounts Management) & Ex-Officio Secretary to Government, Finance Department shall be the Nodal Officer to monitor and coordinate.

By Order and in the Name of the Governor of Karnataka,

**KAVITHA KESTUR**

Controller (AM) & E/o Secretary to Government,

Finance Department.

P.R. 798

## ಇಂಧನ ಸಚಿವಾಲಯ

**ವಿಷಯ:** ಮೆಸರ್ಸ್ ಜಿನೇವಾ ಪವರ್ ಲಿಮಿಟೆಡ್ ಕಂಪೆನಿಗೆ 3.5 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವ ಬಗ್ಗೆ - ಆದೇಶ.

**ಓದಲಾಗಿದೆ:** 1. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್ಇಡಿ/06/ಕೊಲಾಗವೆ/2003/214, ದಿನಾಂಕ: 3.2.2004.

2. ದಿನಾಂಕ: 6.2.2004 ರಂದು ನಡೆದ ಹಂಚಿಕೆ ಸಮಿತಿ ಸಭೆಯ ನಡವಳಿಗಳು.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ: (1) ರಲ್ಲಿ ಓದಲಾದ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರು ಮೆಸರ್ಸ್ ಜಿನೇವಾ ಪವರ್ ಲಿಮಿಟೆಡ್ ಈ ಕಂಪನಿಗೆ ಚಿಕ್ಕಮಗಳೂರು ಜಿಲ್ಲೆಯ ಚಿಕ್ಕಮಗಳೂರು ತಾಲ್ಲೂಕಿನ ಗಿರಿಕಾಸ ಕಾಫಿ ತೋಟದ ಕೊಳಗಾದಿ ತೊರೆಗೆ ಅಡ್ಡಲಾಗಿ 3.5 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ. ಸದರಿ ಪ್ರಸ್ತಾವನೆಯನ್ನು ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ಹಂಚಿಕೆ ಸಮಿತಿಯು ಅನುಮೋದಿಸಿದೆ. ಇದನ್ನು ಕೂಲಂಕುಷವಾಗಿ ಪರಿಶೀಲಿಸಿದ ನಂತರ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಂಇ 54 ಎನ್‌ಸಿಇ 2004, ಬೆಂಗಳೂರು, ದಿನಾಂಕ: 22ನೇ ಜುಲೈ 2004**

ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಮೆಸರ್ಸ್ ಜಿನೇವಾ ಪವರ್ ಲಿಮಿಟೆಡ್ ಈ ಕಂಪನಿಗೆ ಚಿಕ್ಕಮಗಳೂರು ಜಿಲ್ಲೆಯ ಚಿಕ್ಕಮಗಳೂರು ತಾಲ್ಲೂಕಿನ ಗಿರಿಕಾಸ ಕಾಫಿ ತೋಟದ ಕೊಳಗಾದಿ ತೊರೆಗೆ ಅಡ್ಡಲಾಗಿ 3.5 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು (ಲಾಂಜಿಟ್ಯೂಡ್ 75-42'-35" ಪೂರ್ವ ಮತ್ತು ಲ್ಯಾಟಿಟ್ಯೂಡ್ 13-27'-17.5" ಉತ್ತರ) 6 ತಿಂಗಳ ಒಳಗಾಗಿ ಪ್ರಾರಂಭಿಸಬೇಕೆಂಬ ಷರತ್ತಿನೊಂದಿಗೆ ಈ ಕೆಳಗಿನ ನಿಬಂಧನೆಗೊಳಪಟ್ಟು ಹಂಚಿಕೆ ಮಾಡಲಾಗಿದೆ:-

1. (ಅ) ಹಂಚಿಕೆದಾರರು ಈ ಆದೇಶ ಹೊರಡಿಸಿದ ಮೂರು ತಿಂಗಳ ಒಳಗಾಗಿ ಸರ್ಕಾರದೊಂದಿಗೆ ಒಡಂಬಡಿಕೆಯನ್ನು ಮಾಡಿಕೊಳ್ಳತಕ್ಕದ್ದು. ಇಲ್ಲದಿದ್ದಲ್ಲಿ, ಈ ಹಂಚಿಕೆ ತಂತಾನೇ ರದ್ದಾಗುವುದು. ನಂತರ, ಕಂಪೆನಿಯು ಹಂಚಿಕೆಗೋಸ್ಕರ ಪುನಃ ಹೊಸದಾಗಿ ಅರ್ಜಿ ಸಲ್ಲಿಸತಕ್ಕದ್ದು. ಯಾವ ಕಾರಣಕ್ಕೂ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಸ್ವೀಕರಿಸಿದ ಅರ್ಜಿ ಪರಿಷ್ಕರಣಾ ಶುಲ್ಕವನ್ನು ಹಿಂದಿರುಗಿಸಲಾಗುವುದಿಲ್ಲ.

(ಆ) ಅಂತಹ ಒಡಂಬಡಿಕೆಯನ್ನು ರೂ.400.00ರ ಛಾಪಾ ಕಾಗದದ ಮೇಲೆ ಮಾಡಿಕೊಂಡು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದವರಿಗೆ ಕಳುಹಿಸಿ ಪ್ರಮಾಣೀಕರಿಸಿ ಸರ್ಕಾರಕ್ಕೆ ಕಳುಹಿಸಿಕೊಡತಕ್ಕದ್ದು.

(ಇ) ಈ ಒಡಂಬಡಿಕೆಯನ್ನು ಮಾಡಿಕೊಳ್ಳುವ ಮೊದಲು ಯೋಜನಾ ಅಭಿವೃದ್ಧಿದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ವಿವರವಾದ ಯೋಜನಾ ವರದಿಯನ್ನು (ಡಿಪಿಆರ್) ಪರಿಷ್ಕರಿಸಲು ಮೆಗಾವ್ಯಾಟ್ ಒಂದಕ್ಕೆ ರೂ.25,000.00 ದಂತೆ ರೂ.1.00 ಲಕ್ಷಕ್ಕೆ ಕಡಿಮೆ ಇಲ್ಲದಂತೆ ಪಾವತಿಸತಕ್ಕದ್ದು.

2. (ಅ) ಯೋಜನಾ ಅಭಿವೃದ್ಧಿದಾರರು ಸಂಬಂಧಪಟ್ಟ ಎಲ್ಲಾ ಇಲಾಖೆಗಳಿಂದಲೂ ಅಂದರೆ ನೀರಾವರಿ, ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ, ಕರ್ನಾಟಕ ಮಾಲಿನ್ಯ ನಿಯಂತ್ರಣ ಮಂಡಳಿ ಮತ್ತು ಕಂದಾಯ ಇಲಾಖೆಗಳಿಂದ ಕ್ಲಿಯರೆನ್ಸ್‌ಗಾಗಿ ಅರ್ಜಿ ಸಲ್ಲಿಸತಕ್ಕದ್ದು. ಒಡಂಬಡಿಕೆ ಮಾಡಿಕೊಂಡ ಒಂದು ವರ್ಷದೊಳಗಾಗಿ ವಿವರವಾದ ಯೋಜನಾ ವರದಿಯನ್ನು ಸಲ್ಲಿಸತಕ್ಕದ್ದು.

(ಆ) ಹಂಚಿಕೆದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಠೇವಣಿ ಇಡುವ ಹಣವನ್ನು ವಿವರವಾದ ಯೋಜನಾ ವರದಿಯನ್ನು (ಡಿಪಿಆರ್) ಆವಿಷ್ಕರಿಸುವುದಕ್ಕೋಸ್ಕರ ಹೊಂದಾಣಿಕೆ ಮಾಡಿಕೊಳ್ಳಲಾಗುವುದು.

3. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಯೋಜನಾ ವರದಿಗೆ ತಾಂತ್ರಿಕ ಅನುಮೋದನೆ ಕೊಟ್ಟ ಆರು ತಿಂಗಳ ಒಳಗಾಗಿ ಫೈನಾನ್ಸಿಯಲ್ ಕ್ಲೋಷರ್‌ನ್ನು ಸಾಧಿಸತಕ್ಕದ್ದು.

4. ಫೈನಾನ್ಸಿಯಲ್ ಕ್ಲೋಷರ್‌ನ್ನು ಸಾಧಿಸಿದ 24 ತಿಂಗಳ ಒಳಗಾಗಿ ಯೋಜನೆಯನ್ನು ಮುಗಿಸುವ ನಿಟ್ಟಿನಲ್ಲಿ ಹಂಚಿಕೆದಾರರು ಕಾರ್ಯಪ್ರವೃತ್ತರಾಗತಕ್ಕದ್ದು.

5. ಮೇಲೆ ತಿಳಿಸಿದ 2, 3 ಮತ್ತು 4 ಅಂಶಗಳ ಯೋಜನಾ ಅನುಷ್ಠಾನ ಮಾಡಲು ಸಫಲವಾಗದಿದ್ದಲ್ಲಿ ಈ ಹಂಚಿಕೆಯು ತಂತಾನೇ ಯಾವ ಮುನ್ಸೂಚನೆಯನ್ನೂ ನೀಡದೆ ರದ್ದಾಗುವುದೆಂದು ತಿಳಿಯತಕ್ಕದ್ದು.

6. ಯೋಜನಾ ಅಭಿವೃದ್ಧಿದಾರರು ವಿದ್ಯುತ್ತನ್ನು ಮೂರನೆಯವರಿಗೆ ಮಾರಾಟ ಮಾಡುವ ಸಂದರ್ಭದಲ್ಲಿ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದೊಂದಿಗೆ ವೀಲಿಂಗ್ ಅಂಡ್ ಬ್ಯಾಂಕಿಂಗ್ ಒಡಂಬಡಿಕೆ ಮಾಡಿಕೊಳ್ಳಲು ಮತ್ತು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತಕ್ಕೆ ವಿದ್ಯುತ್ತನ್ನು ಮಾರಾಟ ಮಾಡುವ ಸಂದರ್ಭದಲ್ಲಿ ವಿದ್ಯುತ್ ಖರೀದಿ ಒಡಂಬಡಿಕೆ (ಪಿಪಿಎ) ಮಾಡಿಕೊಳ್ಳಲು ಅನುಮತಿ ನೀಡಲಾಗಿದೆ.

7. ಈ ವಿಷಯದಲ್ಲಿ ಹಂಚಿಕೆದಾರರು ರಾಜ್ಯ ಮತ್ತು ಜಿಲ್ಲಾ ಮಟ್ಟಕ್ಕೆ ಸಂಬಂಧಿಸಿದ ಅಧಿಕಾರಿಗಳ ಸಹಾಯ / ಸಹಕಾರವನ್ನು ಪಡೆದು ನಿಗದಿತ ಅವಧಿಯೊಳಗೆ ಯೋಜನಾ ಅನುಷ್ಠಾನ ಪೂರ್ಣಗೊಳಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಎಲ್. ಜಯರಾಂ**

ಪಿ.ಆರ್. 799 ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ.

**ವಿಷಯ:** ಮೆಸರ್ಸ್ ಐ.ಎಂ. ಸುರೇಂದ್ರ ಕಂಪನಿಗೆ 1 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವ ಬಗ್ಗೆ - ಆದೇಶ.

**ಓದಲಾಗಿದೆ:** 1. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್ಇಡಿ/06/ಕೋಲಪಟ್ಟ/2003/08, ದಿನಾಂಕ: 31.12.2003.

2. ದಿನಾಂಕ: 6.2.2004 ರಂದು ನಡೆದ ಹಂಚಿಕೆ ಸಮಿತಿ ಸಭೆಯ ನಡವಳಿಗಳು.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ: (1) ರಲ್ಲಿ ಓದಲಾದ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರು ಮೆಸರ್ಸ್ ಐ.ಎಂ. ಸುರೇಂದ್ರ ಈ ಕಂಪನಿಗೆ ಕೊಡಗು ಜಿಲ್ಲೆಯ ಮಡಿಕೇರಿ ತಾಲ್ಲೂಕಿನ ನಾಪೋಕ್ಲು ಗ್ರಾಮದ ಕೋಲೋಪಟ್ಟಿ ಹೊಳೆಗೆ ಅಡ್ಡಲಾಗಿ 1 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ. ಸದರಿ ಪ್ರಸ್ತಾವನೆಯನ್ನು ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ಹಂಚಿಕೆ ಸಮಿತಿಯು ಅನುಮೋದಿಸಿದೆ. ಇದನ್ನು ಕೂಲಂಕುಷವಾಗಿ ಪರಿಶೀಲಿಸಿದ ನಂತರ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಂಇ 11 ಎನ್‌ಸಿಇ 2004, ಬೆಂಗಳೂರು, ದಿನಾಂಕ: 21ನೇ ಜುಲೈ 2004**

ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಮೆಸರ್ಸ್ ಐ.ಎಂ. ಸುರೇಂದ್ರ ಈ ಕಂಪನಿಗೆ ಕೊಡಗು ಜಿಲ್ಲೆಯ ಮಡಿಕೇರಿ ತಾಲ್ಲೂಕಿನ ನಾಪೋಕ್ಲು ಗ್ರಾಮದ ಕೋಲೋಪಟ್ಟಿ ಹೊಳೆಗೆ ಅಡ್ಡಲಾಗಿ 1 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು (ಲಾಂಜಿಟ್ಯೂಡ್ 75-39'-15" ಪೂರ್ವ (ವಯರ್) ಮತ್ತು 75-39'-12" (ಪಿ.ಹೆಚ್.) ಲ್ಯಾಟಿಟ್ಯೂಡ್ 12-13'-34" ಉತ್ತರ (ವಯರ್) 12-14'-38" (ಪಿ.ಹೆಚ್.) ) 6 ತಿಂಗಳ ಒಳಗಾಗಿ ಪ್ರಾರಂಭಿಸಬೇಕೆಂಬ ಷರತ್ತಿನೊಂದಿಗೆ ಈ ಕೆಳಗಿನ ನಿಬಂಧನೆಗೊಳಪಟ್ಟು ಹಂಚಿಕೆ ಮಾಡಲಾಗಿದೆ:-

1. (ಅ) ಹಂಚಿಕೆದಾರರು ಈ ಆದೇಶ ಹೊರಡಿಸಿದ ಮೂರು ತಿಂಗಳ ಒಳಗಾಗಿ ಸರ್ಕಾರದೊಂದಿಗೆ ಒಡಂಬಡಿಕೆಯನ್ನು ಮಾಡಿಕೊಳ್ಳತಕ್ಕದ್ದು. ಇಲ್ಲದಿದ್ದಲ್ಲಿ, ಈ ಹಂಚಿಕೆ ತಂತಾನೇ ರದ್ದಾಗುವುದು. ನಂತರ, ಕಂಪೆನಿಯು ಹಂಚಿಕೆಗೋಸ್ಕರ ಪುನಃ ಹೊಸದಾಗಿ ಅರ್ಜಿ ಸಲ್ಲಿಸತಕ್ಕದ್ದು. ಯಾವ ಕಾರಣಕ್ಕೂ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಸ್ವೀಕರಿಸಿದ ಅರ್ಜಿ ಪರಿಷ್ಕರಣಾ ಶುಲ್ಕವನ್ನು ಹಿಂದಿರುಗಿಸಲಾಗುವುದಿಲ್ಲ.

(ಆ) ಅಂತಹ ಒಡಂಬಡಿಕೆಯನ್ನು ರೂ.400.00ರ ಛಾಪಾ ಕಾಗದದ ಮೇಲೆ ಮಾಡಿಕೊಂಡು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದವರಿಗೆ ಕಳುಹಿಸಿ ಪ್ರಮಾಣೀಕರಿಸಿ ಸರ್ಕಾರಕ್ಕೆ ಕಳುಹಿಸಿಕೊಡತಕ್ಕದ್ದು.

(ಇ) ಈ ಒಡಂಬಡಿಕೆಯನ್ನು ಮಾಡಿಕೊಳ್ಳುವ ಮೊದಲು ಯೋಜನಾ ಅಭಿವೃದ್ಧಿದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ವಿವರವಾದ ಯೋಜನಾ ವರದಿಯನ್ನು (ಡಿಪಿಆರ್) ಪರಿಷ್ಕರಿಸಲು ಮೆಗಾವ್ಯಾಟ್ ಒಂದಕ್ಕೆ ರೂ.25,000.00 ದಂತೆ ರೂ.1.00 ಲಕ್ಷಕ್ಕೆ ಕಡಿಮೆ ಇಲ್ಲದಂತೆ ಪಾವತಿಸತಕ್ಕದ್ದು.

2. (ಅ) ಯೋಜನಾ ಅಭಿವೃದ್ಧಿದಾರರು ಸಂಬಂಧಪಟ್ಟ ಎಲ್ಲಾ ಇಲಾಖೆಗಳಿಂದಲೂ ಅಂದರೆ ನೀರಾವರಿ, ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ, ಕರ್ನಾಟಕ ಮಾಲಿನ್ಯ ನಿಯಂತ್ರಣ ಮಂಡಳಿ ಮತ್ತು ಕಂದಾಯ ಇಲಾಖೆಗಳಿಂದ ಕ್ಲಿಯರೆನ್ಸ್‌ಗಾಗಿ ಅರ್ಜಿ ಸಲ್ಲಿಸತಕ್ಕದ್ದು. ಒಡಂಬಡಿಕೆ ಮಾಡಿಕೊಂಡ ಒಂದು ವರ್ಷದೊಳಗಾಗಿ ವಿವರವಾದ ಯೋಜನಾ ವರದಿಯನ್ನು ಸಲ್ಲಿಸತಕ್ಕದ್ದು.

(ಆ) ಹಂಚಿಕೆದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಠೇವಣಿ ಇಡುವ ಹಣವನ್ನು ವಿವರವಾದ ಯೋಜನಾ ವರದಿಯನ್ನು (ಡಿಪಿಆರ್) ಆವಿಷ್ಕರಿಸುವುದಕ್ಕೋಸ್ಕರ ಹೊಂದಾಣಿಕೆ ಮಾಡಿಕೊಳ್ಳಲಾಗುವುದು.

3. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಯೋಜನಾ ವರದಿಗೆ ತಾಂತ್ರಿಕ ಅನುಮೋದನೆ ಕೊಟ್ಟ ಆರು ತಿಂಗಳ ಒಳಗಾಗಿ ಫೈನಾನ್ಸಿಯಲ್ ಕ್ಲೋಷರ್‌ನ್ನು ಸಾಧಿಸತಕ್ಕದ್ದು.

4. ಫೈನಾನ್ಸಿಯಲ್ ಕ್ಲೋಷರ್‌ನ್ನು ಸಾಧಿಸಿದ 24 ತಿಂಗಳ ಒಳಗಾಗಿ ಯೋಜನೆಯನ್ನು ಮುಗಿಸುವ ನಿಟ್ಟಿನಲ್ಲಿ ಹಂಚಿಕೆದಾರರು ಕಾರ್ಯಪ್ರವೃತ್ತರಾಗತಕ್ಕದ್ದು.

5. ಮೇಲೆ ತಿಳಿಸಿದ 2, 3 ಮತ್ತು 4 ಅಂಶಗಳ ಯೋಜನಾ ಅನುಷ್ಠಾನ ಮಾಡಲು ಸಫಲವಾಗದಿದ್ದಲ್ಲಿ ಈ ಹಂಚಿಕೆಯು ತಂತಾನೇ ಯಾವ ಮುನ್ಸೂಚನೆಯನ್ನೂ ನೀಡದೆ ರದ್ದಾಗುವುದೆಂದು ತಿಳಿಯತಕ್ಕದ್ದು.

6. ಯೋಜನಾ ಅಭಿವೃದ್ಧಿದಾರರು ವಿದ್ಯುತ್ತನ್ನು ಮೂರನೆಯವರಿಗೆ ಮಾರಾಟ ಮಾಡುವ ಸಂದರ್ಭದಲ್ಲಿ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದೊಂದಿಗೆ ವೀಲಿಂಗ್ ಅಂಡ್ ಬ್ಯಾಂಕಿಂಗ್ ಒಡಂಬಡಿಕೆ ಮಾಡಿಕೊಳ್ಳಲು ಮತ್ತು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತಕ್ಕೆ ವಿದ್ಯುತ್ತನ್ನು ಮಾರಾಟ ಮಾಡುವ ಸಂದರ್ಭದಲ್ಲಿ ವಿದ್ಯುತ್ ಖರೀದಿ ಒಡಂಬಡಿಕೆ (ಪಿಪಿಎ) ಮಾಡಿಕೊಳ್ಳಲು ಅನುಮತಿ ನೀಡಲಾಗಿದೆ.

7. ಈ ವಿಷಯದಲ್ಲಿ ಹಂಚಿಕೆದಾರರು ರಾಜ್ಯ ಮತ್ತು ಜಿಲ್ಲಾ ಮಟ್ಟಕ್ಕೆ ಸಂಬಂಧಿಸಿದ ಅಧಿಕಾರಿಗಳ ಸಹಾಯ / ಸಹಕಾರವನ್ನು ಪಡೆದು ನಿಗದಿತ ಅವಧಿಯೊಳಗೆ ಯೋಜನಾ ಅನುಷ್ಠಾನ ಪೂರ್ಣಗೊಳಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಎಲ್. ಜಯರಾಂ**

ಪಿ.ಆರ್. 800 ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ.

## ಕಂದಾಯ ಸಚಿವಾಲಯ

**ವಿಷಯ:** 2004ರ ಮುಂಗಾರು ಹಂಗಾಮಿನಲ್ಲಿ ಸಿ.ಆರ್.ಎಫ್. ಯೋಜನೆಯಡಿ ಸಣ್ಣ ಮತ್ತು ಅತೀ ಸಣ್ಣ ರೈತರಿಗೆ ರಿಯಾಯಿತಿ ದರದಲ್ಲಿ ಬಿತ್ತನೆ ಬೀಜ ಪೂರೈಸಲು ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ.ಆರ್.ಡಿ.689 ಟಿಎನ್.ಆರ್.2003 ದಿನಾಂಕ 25.3.2004.
2. ಸರ್ಕಾರದ ಆದೇಶ ಸಂಖ್ಯೆ.ಆರ್‌ಡಿ. 689 ಟಿಎನ್.ಆರ್.2003 ದಿನಾಂಕ 24.5.2004.
3. ದಿನಾಂಕ:24.6.2004ರಂದು ನಡೆದ ಪ್ರಕೃತಿ ವಿಕೋಪ ಪರಿಹಾರ ನಿಧಿಯ ಆಡಳಿತ ಮತ್ತು ನಿರ್ವಹಣಾ ಸಮಿತಿ ಸಭೆಯ ನಡವಳಿಗಳು.

**ಪ್ರಸ್ತಾವನೆ:**

2004ರ ಮುಂಗಾರು ಹಂಗಾಮಿನಲ್ಲಿ ರಾಜ್ಯದ ಬರಪೀಡಿತ ಪ್ರದೇಶವೆಂದು ಘೋಷಿಸಲಾಗಿರುವ 162 ತಾಲ್ಲೂಕುಗಳ ಸಣ್ಣ ಮತ್ತು ಅತೀ ಸಣ್ಣ ರೈತರುಗಳಿಗೆ ಶೇ.50ರ ರಿಯಾಯ್ತಿ ದರದಲ್ಲಿ 13 ಬೆಳೆಗಳ ಬಿತ್ತನೆ ಬೀಜಗಳನ್ನು ಸರಬರಾಜು ಮಾಡಲು ಈ ಯೋಜನೆಗೆ ಒಟ್ಟಾರೆ ರೂ.50.00 ಕೋಟಿಗಳ ಅಂದಾಜಿನ ಬೇಡಿಕೆಗಳಿಗೆ ಅಂದಾಜು ಮಾಡಲಾಗಿತ್ತು. ಹಾಗೂ ಈ ಅನುದಾನವನ್ನು ಹಂತ ಹಂತವಾಗಿ ಕೃಷಿ ಇ ಲಾಖೆಗೆ ಬಿಡುಗಡೆ ಮಾಡುವಂತೆ ದಿನಾಂಕ:29.4.2004ರಂದು ನಡೆದ ಪ್ರಕೃತಿ ವಿಕೋಪ ಪರಿಹಾರ ನಿಧಿಯ ಆಡಳಿತ ಮತ್ತು ನಿರ್ವಹಣಾ ಸಮಿತಿ ಸಭೆಯಲ್ಲಿ ನಿರ್ಣಯಿಸಲಾಗಿದೆ. ಈ ಮೇರೆಗೆ ಮೊದಲನೆ ಕಂತಿನಲ್ಲಿ ರೂ.2.50 ಕೋಟಿ ಅನುದಾನವನ್ನು ಮೇಲೆ ಓದಲಾದ (1)ರಲ್ಲಿನ ಆದೇಶದಲ್ಲಿ ಕೃಷಿ ಇ ಲಾಖೆಯ ಕೋರಿಕೆಯಂತೆ ಹಣ ಬಿಡುಗಡೆ ಮಾಡಲಾಗಿದೆ. ಎರಡನೇ ಕಂತಿನ ಹಣ ರೂ.10.00 ಕೋಟಿ ಅನುದಾನವನ್ನು ಮೇಲೆ (2)ರಲ್ಲಿ ಓದಲಾದ ಆದೇಶದಲ್ಲಿ ಬಿಡುಗಡೆ ಮಾಡಲಾಗಿದೆ.

ದಿನಾಂಕ:24.6.2004ರಂದು ನಡೆದ ಪ್ರಕೃತಿ ವಿಕೋಪ ಪರಿಹಾರ ನಿಧಿಯ ಆಡಳಿತ ಮತ್ತು ನಿರ್ವಹಣ ಸಮಿತಿ ಸಭೆಯಲ್ಲಿ 2004ದ ಹಿಂಗಾರು ಹಾಗೂ ಮುಂಗಾರು ಹಂಗಾಮಿಗೆ ರಿಯಾಯಿತಿ ದರದಲ್ಲಿ ಬಿತ್ತನೆ ಬೀಜ ವಿತರಿಸಲು ಬೇಕಾಗುವ ಹೆಚ್ಚುವರಿ ಅನುದಾನ ರೂ.12.00 ಕೋಟಿ ಅನುದಾನವನ್ನು ಒದಗಿಸುವ ಅವಶ್ಯಕತೆ ಬಗ್ಗೆ ಚರ್ಚಿಸಲಾಗಿದೆ. ಇ ದರಿಂದಾಗಿ ಬಿತ್ತನೆ ಬೀಜ ರಿಯಾಯಿತಿ ಸೌಲಭ್ಯಕ್ಕಾಗಿ ಒಟ್ಟು ರೂ.62.00 ಕೋಟಿ ಅನುದಾನವನ್ನು ಬಿಡುಗಡೆ ಮಾಡಬೇಕಾಗಿದೆ.

ಈಗಾಗಲೇ ದಿನಾಂಕ:29.4.2004ರಂದು ನಡೆದ ಸಮಿತಿ ಸಭೆಯಲ್ಲಿ ತೆಗೆದುಕೊಂಡ ನಿರ್ಣಯದ ಹಿನ್ನೆಲೆಯಲ್ಲಿ ಬಿತ್ತನೆ ಬೀಜ ರಿಯಾಯಿತಿಗಾಗಿ ಮೂರನೇ ಕಂತಿನ ಮೊತ್ತ ರೂ.17.50 ಕೋಟಿ ಅನುದಾನವನ್ನು ಬಿಡುಗಡೆ ಮಾಡುವ ಬಗ್ಗೆ ಪರಿಶೀಲಿಸಿ ಈ ಕೆಳಕಂಡಂತೆ ಅದೇಶಿಸಿದೆ.

### ಸರ್ಕಾರಿ ಆದೇಶ ಸಂಖ್ಯೆ:ಆರ್.ಡಿ.689 ಟಿಎನ್‌ಆರ್ 2003, ಬೆಂಗಳೂರು, ದಿನಾಂಕ: 19ನೇ ಜುಲೈ 2004
### (RD 27 R&I 2004)

ಪ್ರಸ್ತಾವನೆಯಲ್ಲಿ ವಿವರಿಸಿದ ಹಿನ್ನಲೆಯಲ್ಲಿ 2004ರ ಮುಂಗಾರು ಹಂಗಾಮಿನಲ್ಲಿ ರಾಜ್ಯದಲ್ಲಿ ಬರಪೀಡಿತ ಪ್ರದೇಶವೆಂದು ಘೋಷಿಸಲಾಗಿರುವ 162 ತಾಲ್ಲೂಕುಗಳ ಸಣ್ಣ ಮತ್ತು ಅತಿಸಣ್ಣ ರೈತರುಗಳಿಗೆ ಶೇ.50ರ ರಿಯಾಯಿತಿ ದರದಲ್ಲಿ 13 ಬೆಳೆಗಳ ಬಿತ್ತನೆ ಬೀಜಗಳನ್ನು ವಿತರಿಸಲು ರೂ.17.50 ಕೋಟಿ (ರೂ.ಹದಿನೇಳು ಕೋಟಿ ಐವತ್ತು ಲಕ್ಷ ರೂಪಾಯಿಗಳನ್ನು) ಪ್ರಕೃತಿ ವಿಕೋಪ ಪರಿಹಾರ ನಿಧಿಯಿಂದ ಕೃಷಿ ನಿರ್ದೇಶಕರಿಗೆ ಬಿಡುಗಡೆ ಮಾಡಲು ಮಂಜೂರಾತಿ ನೀಡಿದೆ.

2. ಮೇಲೆ ಬಿಡುಗಡೆ ಮಾಡಿದ ಅನುದಾನವನ್ನು ಬಳಸುವ ಸಂದರ್ಭದಲ್ಲಿ ಸಮ ಸಂಖ್ಯೆಯ ದಿ.23.9.2003ರ ಅದೇಶದಲ್ಲಿ ನಿಗದಿ ಪಡಿಸಿರುವ ಷರತ್ತು ಹಾಗೂ ಮಾರ್ಗಸೂಚಿಗಳನ್ನು ಕಡ್ಡಾಯವಾಗಿ ಪಾಲಿಸುವುದು.

3. ಮೇಲೆ ಬಿಡುಗಡೆ ಮಾಡಿದ ಅನುದಾನವನ್ನು ಸರ್ಕಾರದ ಕಾರ್ಯದರ್ಶಿ, ಕಂದಾಯ ಇ ಲಾಖೆ ಇ ವರಿಂದ ಸ್ವೀಕೃತಿ ರಶೀತಿ ಮತ್ತು ಚಲನ್ ಮೂಲಕ ರಾಜ್ಯ ಹುಜೂರು ಖಜಾನೆಯಿಂದ ಡ್ರಾ ಮಾಡಿ ಸ್ಟೇಟ್ ಬ್ಯಾಂಕ್ ಆಫ್ ಮೈಸೂರು, ವಿಧಾನಸೌಧ, ಬೆಂಗಳೂರು ಇ ಲ್ಲಿ ನಿರ್ವಹಿಸಲಾಗುತ್ತಿರುವ ಸಿಆರ್‌ಎಫ್ ಖಾತೆಗೆ ಜಮಾ ಮಾಡಿದ ನಂತರ ಕೃಷಿ ನಿರ್ದೇಶಕರಿಗೆ ಚೆಕ್ ಅಥವಾ ಡಿ.ಡಿ.ಮೂಲಕ ಕಳುಹಿಸಲಾಗುವುದು. ತದನಂತರ ಕೃಷಿ ನಿರ್ದೇಶಕರು ಯಾವ ಉದ್ದೇಶಕ್ಕಾಗಿ ಅನುದಾನವನ್ನು ಬಿಡುಗಡೆ ಮಾಡಲಾಗಿದೆಯೋ ಆ ಉದ್ದೇಶಕ್ಕಾಗಿ ಮಾತ್ರ ಸರ್ಕಾರದಿಂದ ಹೊರಡಿಸಿರುವ ಮಾರ್ಗಸೂಚಿ ಪ್ರಕಾರ ಬಳಸತಕ್ಕದ್ದು. ಈ ಅನುದಾನದಲ್ಲಿ ಸಾಧಿಸಿದ ಆರ್ಥಿಕ ಮತ್ತು ಭೌತಿಕ ಪ್ರಗತಿಯ ವರದಿಗಳನ್ನು ಹಾಗೂ ಬಳಕೆ ಪ್ರಮಾಣ ಪತ್ರಗಳನ್ನು ಕೃಷಿ ಆಯುಕ್ತರು ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

4. ಈ ಆದೇಶದಲ್ಲಿ ಬಿಡುಗಡೆ ಮಾಡಿರುವ ರೂ.17.50 ಕೋಟಿ ಮತ್ತು ದಿನಾಂಕ:24.5.2004ರ ಆದೇಶದಲ್ಲಿ ಬಿಡುಗಡೆ ಮಾಡಿರುವ ರೂ.10.00ಕೋಟಿ ಸೇರಿ ಒಟ್ಟು ಮೊತ್ತ ರೂ.27.50 ಕೋಟಿಯನ್ನು ಲೆಕ್ಕಶೀರ್ಷಿಕೆ 2245-02-114-0-01 (ಯೋಜನೇತರ) ಗೆ ಕೆಳಕಂಡ ಲೆಕ್ಕ ಶೀರ್ಷಿಕೆಗಳಿಂದ ಮರುಹೊಂದಾಣಿಕೆ ಮಾಡಿಕೊಳ್ಳುವ ಮೂಲಕ ಭರಿಸುವುದು.

| | | | |
|---|---|---|---|
| 1. | 2245-01-104-0-00 | .... | 3.80 ಕೋಟಿ ರೂ.ಗಳು |
| 2. | 2245-01-800-1-01 | .... | 17.70 ಕೋಟಿ ರೂ.ಗಳು |
| 3. | 2245-02-110-0-01 | .... | 6.00 ಕೋಟಿ ರೂ.ಗಳು |
| | | | 27.50 ಕೋಟಿ ರೂ.ಗಳು |

5. ಈ 27.50 ಕೋಟಿಗಳಲ್ಲಿ ಈಗಾಗಲೇ ರೂ.10.00ಕೋಟಿ ರೂಪಾಯಿಗಳನ್ನು ಲೆಕ್ಕ ಶೀರ್ಷಿಕೆ 2245-01-114-0-01 (ಯೋಜನೇತರ) ರಡಿಯಲ್ಲಿ ಬಿಡುಗಡೆ ಮಾಡಲಾಗಿದೆ. ಈಗ ಬಿಡುಗಡೆ ಮಾಡಲಾಗುತ್ತಿರುವ ರೂ.17.50 ಕೋಟಿಗಳನ್ನು ಲೆಕ್ಕಶೀರ್ಷಿಕೆ 2245-02-114-0-01(ಯೋಜನೇತರ) ಯಲ್ಲಿ ಭರಿಸತಕ್ಕದ್ದು.

6. ಈ ಅದೇಶವನ್ನು ಆರ್ಥಿಕ ಇ ಲಾಖೆಯು ಅನಧಿಕೃತ ಟಿಪ್ಪಣಿ ಸಂಖ್ಯೆ:ಆಇ /659/ವೆಚ್ಚ-7/04 ದಿನಾಂಕ:16.07.2004 ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 830

**ಕೆ. ಸುಧಾಕರ ಶೆಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇ ಲಾಖೆ (ಪರಿಹಾರ ಮತ್ತು ಸೇವೆಗಳು-2)